## ಶ್ರೀ ಗುರು ಗೋಪಾಲದಾಸರ ಕೃತಿಗಳು



## ಶ್ರೀ ವರದ ಗೋಪಾಲದಾಸರ ಕೃತಿಗಳು

## ಶ್ರೀ ವೇಣುಗೋಪಾಲದಾಸರ ಕೃತಿಗಳು



## ಶ್ರೀ ಮೋಹನದಾಸರ ಕೃತಿಗಳು





# ಶುದ್ಧಾಶುದ್ಧ ಪತ್ರಿಕೆ.

---

| ಅಶುದ್ಧ | | ಶುದ್ಧ | ಪುಟ ಪಙ್ಕ್ತಿ |
|---|---|---|---|
| ೩ | ೨ | ದೋರೆವ್ವುದೋ | ದೊರೆವ್ವುದೊ |
| ೪ | ೯ | ಗುರುಹಿರಿಯರಂಘ್ರಿಗೆ | ಹಿರಿಗುರುಗಳಂಘ್ರಿಗೆ |
| ೬ | ೬ | ಮುರಿದುಕೊಟ್ಟ | ಮುರಿದುಮೆಟ್ಟ |
| ೮ | ೧೭ | ಸರಿಯ | ಕರೆಯ |
| ೯ | ೭ | ಚಿನ್ನರಹಿತ | ಛಿನ್ನರಹಿತ |
| ೧೭ | ೧೫ | ಅನಿಮಿಷವಗಲದ | ಅನಿಮಿಷವಗಲದೆ |
| ೨೦ | ೧೫ | ಜರೆದೆ | ಜರಿದೆ |
| ೨೨ | ೪ | ನಿಜವರದ | ಗಜವರದ |
| ೨೩ | ೧೭ | ಶಾಯೊ | ಕಾಯೊ |
| ೨೩ | ೨೨ | ಪಾಲನ | ಪಾಲ |
| ೨೪ | ೩ | ತ್ರಯಂಬಕಾದ್ಯ | ತ್ರಿಯಂಬಕಾದ್ಯ |
| ೨೬ | ೫ | ಮೂರ್ತಿಯಂ | ಮೂರ್ತಿಯ |
| ೨೭ | ೧೦ | ಶ್ರೀವತ್ಸನ | ಶ್ರೀವತ್ಸನ |
| ೨೯ | ೨೧ | ಕೇದಾರ ಕಟ್ಟಿದೆ | ಕೇದಾರಕಟ್ಟಿವೆ |
| ೩೧ | ೧೫ | ಕಾಯ್ದುಯ್ಯ | ಕಾಯ್ದುಯ್ಯ |
| ೩೨ | ೧೩ | ಶಿಥಿಲಸುಪಮ | ಶಿಥಿಲಿಸುಪಮ |
| ೩೩ | ೬ | ಪೂತಾಗ್ರೇಸರ | ಪೂರಾಗ್ರೇಸರ |
| ೩೫ | ೧೯ | ಒಡೆದುಕಾಯೊ | ಒಡೆಯಕಾಯೊ |
| ೩೬ | ೧೭ | ವದನತೆರೆಸು | ವದನವತೆರೆವೆ |
| ೩೭ | ೧೪ | ಹೇಳುವೆನವರಿಗೆ | ಪೇಳುವೆ ಪರಂಗೆ |
| ೩೮ | ೩ | ಓಡಿಮರುಳಾದೆ | ಓದಿಮರುಳಾದೆ |
| ೩೮ | ೧೨ | ವಿದೂರ | ನಿದೂರ |

| ಪುಟ | ಪಙ್ಕ್ತಿ | ಅಶುದ್ಧ | ಶುದ್ಧ |
|---|---|---|---|
| ೩೯ | ೧೪ | ಮೂಲ | ಮೂಲಾ |
| ೪೫ | ೨ | ಕುಟಲ | ಕುಟಿಲ |
| ೪೫ | ೨ | ಅಟತವಾನಲ | ಅಟದವಾನಲ |
| ೪೫ | ೧೬ | ಜ್ಞಾನದಿಂಡಲಿ | ಜ್ಞಾನದಿಂದಲಿ |
| ೪೬ | ೨೬ | ಕರೆ | ಕರ |
| ೪೭ | ೧ | ತೊಳಲೊ | ತೊಳೆಯೊ |
| ೪೭ | ೧ | ಕಳೆಲೊ | ಕಳೆಯೊ |
| ೪೭ | ೪ | ದುರಿತಾಘ | ದುರಿತೌಘ |
| ೪೭ | ೫ | ಪಠಿಪರಿಯ | ಪರಿಪರಿಯ |
| ೫೪ | ೭ | ಕಚ್ಚುಲ | ಕಚ್ಚುಟ |
| ೬೧ | ೧೦ | ಸೀಪಾಲಿಸೋ | ಸರ್ವೇಶ್ವರ |
| ೬೨ | ೪ | ಸರಿಗೆ | ಸರಿಗೆ |
| ೬೩ | ೧ | ಜನ | ಜನಾ |
| ೬೩ | ೧೪ | ಕೃತಾಖಿಳಕ್ರಿಯೆಗಳಾ ಸಿನ್ನಿಂದ | ಕೃತಾಖಿಳಕ್ರಿಯಂಗಳಿಂದ ನಿನ್ನನ್ನು |
| ೬೪ | ೧೮ | ಮಾಡೆಸೋ | ಮಾಡಿಸೋ |
| ೭೨ | ೧೨ | ಜಲಸಿಧೆ | ಜಲನಿಧಿ |
| ೭೨ | ೧೩ | ರದನದ ಘಯ | ರದನದಘಯ |
| ೭೪ | ೨೩ | ತುತುಸಿ | ತುತಿಸಿ |
| ೭೫ | ೪ | ಆರೆಸಿ | ಆರಸಿ |
| ೭೭ | ೬ | ಶೀಲ | ಶೀಲ |
| ೭೭ | ೨ | ಸಾಕ್ಷಿಸೆ | ಸಾಕ್ಷಿಗೆ |
| ೭೮ | ೧ | ಋಣಲಾರ | ಋಣಲಾರಿ |
| ೭೮ | ೧೬ | ಗೋಪಾಲ | ಗೋಕುಲ |
| ೮೦ | ೯ | ಧರ್ಮಧ್ವಿ | ಧರ್ಮಧ್ವಿ |
| ೯೦ | ೧೦ | ಕಾಳಂಕೆ | ಕಾಳಿಂಗ |

| ಪುಟ | ಪಙ್ಕ್ತಿ | ಅಶುದ್ಧ | ಶುದ್ಧ |
|---|---|---|---|
| ೮೦ | ೧೮ | ತಾನೊತ್ರೆಯೆ | ತಾವ್ ಮೊರೆಯೆ |
| ೮೧ | ೬ | ಶರುಗಳಿಗೆ | ಶುರುಗಳಿಗೆ |
| ೮೫ | ೧೯ | ಮೇಲಿನ್ನು | ಸೋಲೇಸೋ |

ಪುಟ ೮೮ ರಲ್ಲಿ ೭ ನೇ ನುಡಿ ಬಿಟ್ಟುಹೋಗಿದೆ. ಹೀಗಿರಬೇಕು.

ಮಾಯಿಗಳು ಹೆಚ್ಚಿ ಮಹಿಯೆಲ್ಲ ವ್ಯಾಪಿಸೆ
ಆ ಯಜ್ಞಭುಜರು ಮತಿಗೆಟ್ಟು ಬಳಲುತ್ತ
ತೋಯಜಭವನಿಗೆ ವಂದಿಸಿ ಪೇಳಲಾತನು
ಶ್ರೀಯರಸಗೆ ಪೇಳೆ ಹರಿನಿನ್ನ ಮೊಗನೋಡೆ
ಆಯತವರಿತು ನೀನವನಿಯೊಳಗೆ ಮಧ್ಯ
ಗೇಹಭಟ್ಟರಲ್ಲಿ ಜನಿಸಿ ಅಚ್ಯುತ ಪ್ರೇಕ್ಷಾ
ಚಾರ್ಯರಿಂದುಪದೇಶಗೊಂಡು ಗ್ರಂಥವನೋದಿ
ನ್ಯಾಯಶಾಸ್ತ್ರವ ಮಾಡಿ ಸುರರಿಗೆ ಅದರರ್ಥ
ಪೀಯೂಷವನೆ ಉಣಿಸಿ—ಮೋಹಕಶಾಸ್ತ್ರ
ಹೇಯವೆಂದು ತೋರಿಸಿ—ಅಜ್ಞಾನದ
ಮಾಯಾ ನಿರಾಕರಿಸಿ—ಸರ್ವರಿಗೆಲ್ಲ
ಶ್ರೇಯಮಾರ್ಗವ ತೋರಿ ಮೆರೆದಮಾತರಿಶ್ವ ೭

ಮೂರೆಂದು ಶರಿರ ವ್ಯಾಪ್ತ-ಮಧ್ವರಾಯ
ಮೂರುತಾಪ ನಿರ್ಲಿಪ್ತ-ಶಕ್ತಮುನಿ
ಮೂರು ಲೋಕದಿ ಪೂತ ಮುಕುತಿ ಪ್ರದಾತ

ಇದು ಹೀಗಿರಬೇಕೂ

ಮೂರೊಂದು ಶರಿರವ್ಯಾಪ್ತ-ನಾರಾಯಣ
ಮೂರುತಿ ದೂತ ಆಪ್ತ-ಮಧ್ವರಾಯ
ಮೂರು ಲೋಕವ ಪೊತ್ತ ಮುಕುತಿಪ್ರದಾತ

| | | | |
|---|---|---|---|
| ೯೦ | ೧ | ಪಂಚಾನನ ಸುರಮುಖ್ಯಾ | ಪಂಚಾನನ ಅಹಿಖಗಾ |
| ೯೦ | ೧೭ | ಸುಕಲಾಪೆ | ಸುಕಲಾಪ |

| ಪುಟ | ಪಙ್ತಿ | ಅಶುದ್ಧ | ಶುದ್ಧ |
|---|---|---|---|
| ೯೭ | ೨೫ | ಅರುಯುವ | ಅರಿಯುವ |
| ೧೦೩ | ೬ | ಬ'ಂದನಕ್ಕೆ | ಬಂಧನಕ್ಕೆ |
| ೧೦೩ | ೨೨ | ಶರೀರ | ಶರೀರ |
| ೧೦೩ | ೨೩ | ಪರರಲೋಕ | ಪರಲೋಕ |
| ೧೦೯ | ೨೪ | ಸೇಅರು | ಸೇರಿಅರು |
| ೧೧೦ | ೧೧ | ಪರಮಾತನು | ಪರಮಾತ್ಮನು |
| ೧೧೫ | ೨೨ | ಅನಮಿತ್ತ | ಅನಿಮಿತ್ತ |
| ೧೨೭ | ೧೫ | ದಿನಗಳೆದವನಾಯ | ದಿನಗಳೆದವನಾಯು |
| ೧೨೮ | ೧೨ | ಸತುವಮಾರ್ಗದಿಸಂತತ | ಸತತಶ್ರೀಕರಣದಿ ಸಂ |
| ೧೨೮ | ೨೦ | ಅತುಳಮಹಿಮನಾ ದಿನದಲ್ಲಿ | ಅತುಳಮಹಿಮ ಹಿಂದಿನ ದಿನದಲ್ಲಿ |
| ೧೪೩ | ೧೮ | ಭವಾಬ್ಧಿಯಲಂದ | ಭವಾಬ್ಧಿಯಲಿಂದ |
| ೧೪೬ | ೪ | ಪ್ರಿಯದೀ | ಪ್ರಿಯದಿ |
| ೧೪೬ | ೬ | ಮಾಡಿದಡಾಯಿತು | ಮಾಡಿದಡಾಯಿತೆ |
| ೧೫೧ | ೧೨ | ಮುಖ್ಯರಲ್ಲಾ | ಮುಖ್ಯರೆಲ್ಲಾ |
| ೧೫೭ | ೨ | ಪರಬೊಮ | ಪರಬೊಮ್ಮ |
| ೧೫೭ | ೫ | ಪರಮಾತ್ಮನ ರಕ್ಷಣ | ಪರಮಾತ್ಮನರಕ್ಷಣ |
| ೧೫೩ | ೧೯ | ತೂರಿಸೊ | ತೋರಿಸೊ |
| ೧೫೬ | ೨೪ | ಮುಕ್ತಜ್ಞಾ | ಮುಕ್ತಜ್ಞಾನಿ |
| ೧೫೮ | ೨ | ಇಂದಿರಪತಿ | ಇಂದಿರಾಪತಿ |
| ೧೫೯ | ೨೪ | ಕೊಂಡೊಯ್ದಂತೆ | ಕೊಂಡಿದ್ದಂತೆ |
| ೧೬೧ | ೩ | ....ನೆಚ್ಚರಿಸಂದದಕೆ, | ....ನೆಚ್ಚರಿಸಿದಂದಕೆ |
| ೧೬೧ | ೧೦ | ವಿಷಯದ | ವಿಷಯದಾ |
| ೧೬೪ | ೫ | ಸಿದ್ರೆಮೂರ್ತಿಯ | ಸೀ ಶ್ರೀಮೂರ್ತಿಯ |
| ೧೭೧ | ೧೨ | ಚಾಂದ್ರಾಯಣಾ | ಚಾಂದ್ರಾಯಣ |
| ೧೭೧ | ೨೫ | ತಪ್ಪೇನು | ತಪ್ಪನು |

ಶ್ರೀರಾಮಸಹಾಯಂ

# ಶ್ರೀ ಕರ್ಣಾಟಕ ಹರಿದಾಸ ಕೀರ್ತನ ತರಂಗಿಣಿ

## ಶ್ರೀ ಪಾಂಡುರಂಗ ವಿಠಲಾಯನಮಃ

---

೧. ರಾಗ ಆರಭಿ ತ್ರಿಪುಟತಾಳ.

ಇದು ಏನೋ ಚರಿತ ಯಂತ್ರೋದ್ಧಾರ
ಇದು ಏನೊ ಚರಿತ ಪ

ಇದು ಏನೊ ಚರಿತ ಶ್ರೀ ಪದುಮನಾಭನ ದೂತ
ಸದಾಕಾಲ ಸರ್ವರ ಹೃದಯಾಂತರ್ಗತನಾಗಿ ಅ.

ವಾರಿಧಿ ಗೋಷ್ಪಾದ ನೀರಂತೆ ದಾಟಿದ
ಧೀರ ಯೋಗಾಸನ ಧಾರಿಯಾಗಿಪ್ಪುದು ೧.

ದುರುಳ ಕೌರವರನ್ನು ವರಗದೆಯಲಿ ಕೊಂದ
ಕರದಲ್ಲಿ ಜಪಮಾಲೆ ಧರಿಸಿ ಎಣಿಸುವುದು ೨.

ಹೀನ ಮತಗಳನ್ನು ವಾಣಿಲಿ ತಂದಂಥ
ಜ್ಞಾನವಂತನೆ ಹೀಗೆ ಮೌನವಾಗಿಪ್ಪುದು ೩.

ಸರ್ವವ್ಯಾಪಕ ನೀನು ಪೂರ್ವಿಕ ದೇವನೆ
ಶರ್ವನ ಪಿತ ಬಂದು ಪರ್ವತ ಸೇರಿದ್ದು ೪.

ಗೋಪಾಲವಿಠಲಗೆ ನೀ ಪ್ರೀತಿಮಂತ್ರಿಯು
ವ್ಯಾಪಾರಮಾಡದೆ ಈಪರಿ ಕುಳಿತಿಹೆ ೫

೨. ರಾಗ ಶಂಕರಾಭರಣ ಆದಿತಾಳ.

ಒಲಿದೆ ಏತಕಮ್ಮ ಲಕುಮಿ ವಾಸುದೇವಗೆ ಪ.
ಹಲವಂಗದವನ ಹವಣೆ ತಿಳಿದು ತಿಳಿದು ತಿಳಿಯದ್ಹಾಗೆ ಅ.

ಕಮಲಗಂಧಿ ಕೋಮಲಾಂಗಿ ಸುಂದರಾಬ್ಜವದನೆ ನೀನು
ರಮಣ ಮತ್ಸ್ಯ ಕಠಿಣಕಾಯ ಸೂಕರಾಸ್ಯನು
ರಮಣೀಯ ಸ್ವರೂಪಿ ನೀನು ಅಮಿತ ಘೋರರೂಪನವನು
ನಮಿಪ ರಿಷ್ಟದಾನಿ ನೀನು ದಾನವ ಬೇಡುವನಿಗೆ ೧.

ಜಾಣೆ ರತ್ನಾಕರನ ಮಗಳು ನೀನು ಕ್ರುದ್ಧ ಭೃಗುಜನವನು
ಆನಂದಾಬ್ಜವದನೆ ನೀನು ವನವಾಸಿ ಅವನು
ಮಾನೆ ಪತಿವ್ರತೆಯು ನೀನು ನಾನಾಯೋಷಿತ್ಕಾಮಿ ಅವನು
ಜ್ಞಾನೆ ಚಿತ್ರವಸನೆ ನೀನು ಹೀನ ಚೈಲದವನಿಗೆ ೨.

ಲಲಿತೆ ಚಾರುಶೀಲೆ ನೀನು ಕಲಿಕಿ ಕಲಹ ಪ್ರಿಯನವನು
ಕುಲದ ಕುರುಹು ಇಲ್ಲ ಗುಣದ ನೆಲೆಯು ಕಂಡಿಲ್ಲ
ಹಲವು ಕಾಲದವನು ಅವನ ಬಳಗ ಬಂಧು ನಿಷ್ಕಿಂಚನರು
ಜಲಧಿ ಅಲದೆಲೆಯಮೇಲೆ ಮಲಗಿ ಬೆರಳ ಸವಿವನಿಗೆ ೩.

ಅವನ ವಾರ್ತೆ ಕೇಳಿದವರು ಒಲ್ಲರು ಸಂಸಾರವನ್ನು
ಅವನ ಮೂರ್ತಿ ನೋಡಿದವರು ಮನೆಯ ಧನವ ಬಿಡುವರು
ಅವನ ಪುರಕೆ ಪೋದ ಜನರು ಒಮ್ಮೆಗನ್ನ ಹಿಂದಿರುಗರು
ಅವನು ತಾನೇ ತನಯರ ತನ್ನವಯವದಿಂದ ಪಡೆದವಗೆ ೪.

ಸ್ವರತಾತ್ವನಪೇಕ್ಷಾನ್ವಿತಕಾಮಿ ನಿದ್ರಾಹೀನ ಅನಶನಿಯು
ಸ್ಪುರುಷರೂಪ ವಾಚ್ಯಶಬ್ದ ಅಮಿತ ಭೋಕ್ತನು
ಗುರು ಗೋಪಾಲ ವಿಠ್ಠಲನು ನಿರುತ ತನ್ನ ವಕ್ಷದೊಳು
ಅರಮನೆಯಮಾಡಿ ಕೊಟ್ಟು ಮರುಳು ಮಾಡಿದವಾಯಾ

[ವಗೆ ೫

## ೧. ರಾಗ ಮುಖಾರಿ ಆದಿತಾಳ.

ಆನಪು ನಿನ್ನಂಘ್ರಿ ಸೇವೆ ಎನಗೆಂತು ದೊರೆವುದೋ
ಮನದ ದುರ್ವಿಷಯದ ಬಾಧೆಗೆ ಕೊನೆಗಾಣೆ ಮಾಧವ ಪ.

ನೋಡ ಬಾರದ ರೂಪವ ನೋಡಿ ನಯನ ಕಂಗೆಡಿಸಿತೊ
ಆಡ ಬಾರದ ನಾಡಿ ಜಿಹ್ವೆ ಅತಿ ತುಚ್ಛನ್ನ ಮಾಡಿತೊ
ಮಾಡ ಬಾರದ ಬಯಕೆಗಳಿಂದ ಮನ ಹೊಲಿಗೆಳಿಸಿತೊ
ನೋಡಲಿಲ್ಲ ಪಾಡಲಿಲ್ಲ ನಿನ್ನಧ್ಯಾನ ಮಾಡಲಿಲ್ಲ ಕ್ಷಣವು ನಾ ೧.

ಆರದು ಈ ತನು ಆರದು ಈ ಧನ ಆರು ಬಂಧುಗಳಾರಿಗೋ
ಆರಿಗೋಸುಗ ಪಡುವೆ ಧಾವತಿ ಆರಿಗೆ ಉಪಕಾರವೋ
ಘೋರವಾದ ಕ್ಷುಧೆ ತೃಷೆ ಮಮತಾಹಂಕಾರದಿ ಮುಳುಗಿ
ಗಾರು ಮಾಡುವೆ ಸ್ವೈಸ್ವೈ ನಿನ್ನುಪಕಾರವೆ ಇದು ಮಾಧವ ೨.

ಹಿಂದಿನ ಕಾಲದಿ ಬಹು ಕಾಯ ಹೀಗಾಗಿ ಪೋಯಿತೊ
ಇಂದಿನ ದೇಹದ ವಿಚಾರ ಈ ವಿಧವಾಯಿತೊ
ಮುಂದೆ ನಿನ್ನ ಪದ ಸನ್ನಿಧಿ ಹೊಂದುವ ಬಗೆಯಾವುದೊ
ತಂದೆ ನಿನ್ನ ಬಂಧಕ ಶಕುತಿಯಿಂದಲೆ ಹೀಗಾಯಿತೊ ೩.

ಕ್ಷಣ ಭಂಗುರ ವಿಷಯೇಂದ್ರಿಯ ತನು ಸ್ಥಿರವೆಂದರಿತು ನಾ
ವನಜ ಸಂಭವನ ಕಲ್ಪತನಕ ಯೋಚಿಸುವೆನೊ
ನೆನೆಸಲೊಮ್ಮೊಮ್ಮೆ ಸೋಜಿಗ ವೆನಗೆ ತೋರುತಲಿದೆ
ಮನದಾಸೆಗೆ ಕೊನೆಗಾಣದೆ ನಿನಗೆ ಮೊರೆಯಿಡುವೆನೊ ೪.

ಕಾಲದೇಶ ವಿದ್ಯಾ ಪ್ರಕೃತಿ ಕಾರ್ಯಕಾರಣ ಸಂಸ್ಕೃತಿ
ಮೂಲ ಜಾಲಂಗಳಿಗೆ ಮುಖ್ಯ ಮೂಲನೆಂದು ನಂಬದೆ
ಆಲಸ್ಯ ಸಲ್ಲದೊ ಭವಕೆ ಆರಿಗೆ ಮೊರೆಯಿಡುವೆನೊ
ಪಾಲಿಸುವುದು ಚಿತ ಗುರು ಗೋಪಾಲ ವಿಠಲ ವೇಂಕಟ ೫.

೪. ರಾಗ ಕಾಂಬೋದಿ ಝಂಪೆತಾಳ.

ಆವ ರೋಗವೊ ಎನಗೆ ದೇವಧನ್ವಂತ್ರಿ ಪ.

ಸಾವಧಾನದಿ ಕೈಯ ಪಿಡಿದು ನೀ ನೋಡಯ್ಯ ಅ.

ಹರಿಮೂರ್ತಿಗಳು ಕಾಣಿಸವು ಎನ್ನ ಕಂಗಳಿಗೆ
ಹರಿಯ ಕೀರ್ತನೆಯು ಕೇಳಿಸದೆನ್ನ ಕಿವಿಗೆ
ಹರಿಮಂತ್ರ ಸ್ತೋತ್ರ ಬಾರದು ಎನ್ನ ನಾಲಿಗೆಗೆ
ಹರಿಪ್ರಸಾದವು ಎನಗೆ ಸವಿಯಾಗದ್ದೈಯ ೧.

ಹರಿಪಾದ ಸೇವೆಗೆನ್ನ ಹಸ್ತಗಳು ಚಲಿಸವು
ಗುರು ಹಿರಿಯರಂಘ್ರಿಗೆ ಶಿರಬಾಗದು
ಹರಿಯ ನಿರ್ಮಾಲ್ಯ ವಾಘ್ರಾಣಿಸದು ನಾಸಿಕವು
ಹರಿಯಾತ್ರೆಗಳಿಗೆನ್ನ ಕಾಲೇಳದಯ್ಯ ೨.

ಅನಾಥ ಬಂಧು ಗೋಪಾಲ ವಿಠ್ಠಲರೇಯ
ಎನ್ನ ಭಾಗದ ವೈದ್ಯ ನೀನೆಯಾದಿ
ಅನಾದಿ ಕಾಲದ ಭವರೋಗ ಕಳೆಯಯ್ಯ
ನಾನೆಂದಿಗೂ ಮರೆಯೆ ನೀ ಮಾಡಿದುಪಕಾರ ೩

೫. ರಾಗ ಕಾಂಬೋದಿ ಝಂಪೆತಾಳ

* ಐದನೇ ತಿಂಗಳಲಿ ನಿಶ್ಚೈಸಿದೆ ಪ.

ಐದು ವರುಷದವನು ಮುಂದಾಹ ಶುಭಚರಿತೆ ಅ.

---

*ಐದನೇ ತಿಂಗಳಲಿ = ಶ್ರವಣದಿಂದ
ಐದು ವರುಷದವನು = ಪ್ರಜೋತ್ಪತ್ತಿ = ಬ್ರಹ್ಮ
ಐದರೊಳಗೊಂದರ ತನಯ = ಪಂಚಭೂತಗಳಲ್ಲಿ ಒಂದಾದ ವಾಯುವಿನ ಪುತ್ರ = ಹನುಮಂತ

ಐದರೊಳಗೊಂದರ ತನಯನೆನಿಸಿಕೊಂಡು
ಐದರೊಳಗೊಂದು ಮಾರ್ಗವನೆ ಪಿಡಿದು
ಐದರೊಳಗೊಂದು ರಾಶಿಯ ಹಾರಿ ರಕ್ಕಸರ
ಐದೆರಡು ವರುಷಗಳ ವ್ಯಾನವಮಾಡಿದನೆಂದು ೧

ಐದರೊಳಗೊಂದರ ತನಯಳಿಗೆ ನಮಿಸಿ ಮ
ತ್ತೈದೆರಡು ಮುಖದವನ ಸುತವೀರನ
ಐದತ್ವವೈದಿಸಿ ಅರಿಯುವರ ಪುರವನ್ನು
ಐದರೊಳಗೊಬ್ಬನ ಮುಖಕೆ ನೀಡಿದನೆಂದು ೨

ಐದು ಇಂದ್ರಿಯಗಳೊಳಗೊಂದರಧಿಪನ ಸುತನ
ಐದು ಪ್ರಾಣವನು ಸೆಳೆದವನ ರಥಕೆ
ಐದು ನಾಲ್ಕು ಗ್ರಹಗಳೊಳಗೆ ಕಡೆಯವನೆನಿಸಿ
ಐದು ರೂಪದಿ ನಮ್ಮೊಳಿದ್ದು ಸಲಹುವನೆಂದು ೩

ಐದರೊಳಗೊಂದು ಮಾರ್ಗ = ಆಕಾಶಮಾರ್ಗ
ಐದರೊಳಗೊಂದು ರಾಶಿ = ಸಮುದ್ರ
ಐದೆರಡು ವರುಷಗಳ = ಧಾತು
ಐದರೊಳಗೊಂದರ ತನಯಳು = ಭೂ ಪುತ್ರಿ = ಸೀತೆ
ಐದೆರಡು ಮುಖದವನು = ದಶಮುಖ = ರಾವಣ
ಐದತ್ವ = ಪಂಚತ್ವ = ಮೃತ್ಯು
ಐದರೊಳಗೊಬ್ಬನ ಮುಖ = ಅಗ್ನಿಮುಖ
ಐದು ಇಂದ್ರಿಯಗಳೊಳಗೆ ಒಂದರಧಿಪನ ಸುತ = ಚಕ್ಷುರಿಂದ್ರಿಯಾಭಿಮಾನಿಯಾದ ಸೂರ್ಯ ಪುತ್ರ ಕರ್ಣ
ಐದು ಪ್ರಾಣವ ಸೆಳೆದತನು = ಅರ್ಜುನ
ಐದುನಾಲ್ಕುಗ್ರಹ = ನವಗ್ರಹ, ಕಡೆಯವ = ಕೇತು, ಎಂದರೆ ಧ್ವಜ
ಐದು ರೂಪದಿ = ಪ್ರಾಣಾಪಾನ ವ್ಯಾನೋದಾನ ಸಮಾನ ರೂಪಗಳಿಂದ
ಐದರೊಳು = ಧರ್ಮಾದಿ ಪಂಚಪಾಂಡವರ ಗುಂಪಿನಲ್ಲಿ

ಐದ (ವ) ರೊಳು ನೋಡಲು ಅತಿಬಲವೆಂದೆನಿಸಿ
ಐದೊಂದುರಥಿಕರೊಳು ಅಧಿಕನೆನಿಸಿ
ಐದು ಪುರ ಬೇಡೆ ಕೊಡದಿರಲವನ ಮಡುಹಿಸುರ
ಐದು ಮುತ್ತೈತನ ದೂರವಮಾಡಿದನೆಂದು ೪

ಐದು ಬಾಣನ ಗೆಲಿದ ಆಶ್ರಮವ ಕೈಕೊಂಡು
ಐದೊಂದು ಅರಿಗಳನು ಮುರಿದು ಮೆಟ್ಟಿ-
ಐದು ಪ್ರಾಣರಿಗೆ ಗುರು ಗೋಪಾಲ ವಿಠ್ಠಲನ
ಐದೆರಡು ನಾಮಗಳಿಂದ ಭಜಿಸುವನೆಂದು ೫

೬. ರಾಗ ವರಾಳಿ ಆದಿತಾಳ.

ಇಂದಿರೇಶ ನಿನ್ನ ದೊಂದೆಕ್ರಿಯವು
ದ್ವಂದ್ವ ದ್ವಂದ್ವ ವಾಯಿತೊ ಪ.

ಕುಂದು ತೋರಿತು ಖಳರಿಗೆ ಪರಮಾ
ನಂದ ವಾಯಿತು ವೃಂದಾರಕರಿಗೆ ಅ.

---

ಐದೊಂದು ರಥಿಕರು = ಷಡ್ರಥಿಕರು
ಐದು ಪುರಬೇಡೆ = ಶಕ್ರಪ್ರಸ್ಥವೇ ಮೊದಲಾದ ಐದು ಊರುಗಳನ್ನು ಬೇಡಲು
ಐದು ಮುತ್ತೈತನ = ಮುತ್ತೈದೆ ತನ. ಹರಿದ್ರಾ, ಕುಂಕುಮ, ಒಳೆ, ಬಿಚ್ಚೋಲೆ, ಮಾಂಗಲ್ಯ
ಐದು ಬಾಣನ ಗೆಲಿದ ಆಶ್ರಮ = ಮನ್ಮಥನನ್ನು ಗೆದ್ದ ಅಂದರೆ ಇಂದ್ರಿಯವನ್ನು ನಿಗ್ರಹಿಸಿದ ಸನ್ಯಾಸಾಶ್ರಮ
ಐದೊಂದು ಅರಿಗಳು = ಷಡ್ರಿಪುಗಳು, ಕಾಮ ಕ್ರೋಧಾದಿಗಳು
ಐದು ಪ್ರಾಣರಿಗೆ ಗುರು = ಪ್ರಾಣಾಪಾನಾದಿಗಳಿಗೆ ಗುರುವಾದ ಮುಖ್ಯಪ್ರಾಣನು
ಐದೆರಡು ನಾಮಗಳಿಂದ = ಮತ್ಸ್ಯಾದಿ ದಶನಾಮಗಳಿಂದ—

ಜನನ ಕ್ರಿಯವೆ ದೇವಕಿ ತನುಜನಾಯಿತೊ
ಜನನ ಕ್ರಿಯವೆ ಜೈನರ ಮನೆತನವಳಿಯಿತೊ
ಸ್ತನ್ಯಪಾನದಿಂದ ಗೋಪಿಗೆ ಘನಮೋದವಾಯಿತೊ
ಸ್ತನ್ಯಪಾನದಿಂದ ಪೂತನಿ ಪ್ರಾಣವೆ ಹೋಯಿತೊ ೧

ಬಾಲಕ್ರೀಡೆ ಯಮಳಾರ್ಜುನರ ಪಾಲಿಸಿತೊ ಕರುಣದಿ
ಬಾಲಕ್ರೀಡೆ ಶಕಟಾದ್ಯರನು ಮೂಲನಾಶನ ಮಾಡಿತೊ
ಪಲಾಯನವೆ ಮುಚುಕುಂದನಿಗೆ ಪರಮ ಗತಿಯ ನೀಡಿತೊ
ಪಲಾಯನವೆ ಕಾಲಯವನನ ಪ್ರಾಣವಪಹರಿಸಿತೊ ೨

ಬಂಧುತನವೆ ಧರ್ಮಾದ್ಯರನು ಎಂದದೊಳು ಕಾಯಿತೊ
ಬಂಧುತನವೆ ಪೌಂಡ್ರಕರಸನ ಮಂದಭಾಗ್ಯನ ಮಾಡಿತೊ
ಬಂದೀವಚನ ಇಂದ್ರಾದ್ಯರಿಗಾನಂದಕರವಾಯಿತೊ
ಬಂದೀವಚನ ವಿರೋಚನಗೆ ಬಂಧವ ತಂದಿಟ್ಟಿತೊ ೩

ಕರಸ್ಪರ್ಶವಾಗೆ ತುರುಗಳ ಮರಣ ಪರಿಹರಿಸಿತೊ
ಕರವ ವದನದೊಳಿಡೆ ಕೇಶಿಗೆ ಮರಣವೆ ಒದಗಿತೊ
ಸರವಿಶ್ವರೂಪ ನೋಡೆ ಹರುಷೋದ್ರೇಕವಾಯಿತೊ
ದುರ್ಯೋಧನ ನೋಡಲವಗೆ ದುಃಖವೆ ಬಲುಹೆಚ್ಚಿತೊ ೪

ಗುಣ ರೂಪ ಕ್ರಿಯಾಬಲದ ಕೊನೆಯಾವನು ಬಲ್ಲನೊ
ನಿನಗೆ ವೈಷಮ್ಯಾದಿ ಲೇಶವನು ಕಾಣೆ ಶ್ರೀಶನೆ
ದನುಜ ವಿಬುಧರ ಮನದನುಸಾರದಾತನೆ
ಮಣಿದು ಬೇಡುವೆ ಕಾಯೊ ಗೋಪಾಲವಿಠ್ಠಲ ೫

೬. ರಾಗ ಕಾಂಬೋದಿ ಝಂಪೆತಾಳ.

ಈ ಪರಿಯ ಅಧಿಕಾರ ಒಲ್ಲೆನಾನು ಪ.

ಶ್ರೀಪತಿಯೆ ನೀನೊಲಿದು ಏನು ಕೊಟ್ಟಿದೆ ಸಾಕು ಅ.

ಚಿರಕಾಲ ನಿನ್ನ ಕಾದು ತಿರುಗಿದುದಕೆ ನೀನು
ಕರುಣದಿಂದಲಿ ರಚಿಸಿ ಈ ದುರ್ಗದಿ
ಇರಹೇಳಿದುದಕೆ ನಾ ಹೊಕ್ಕು ನೋಡಿದೆ ಒಳಗೆ
ಪುರುಡು ಲೇಶವು ಕಾಣೆ ಕರೆಕರೆಯು ಬಲವೆರಡು ೧.

ದಾರಿಯಲಿ ಹೋಗಿ ಬರುವುದಕೆ ಉಪಟಗಳ ಘನ್ನ
ಚೋರಪಟ್ಟುಳಿಗಂತು ನೆಲೆಯು ಇಲ್ಲ-
ವೈರಿವರ್ಗದ ಜನರ ಬಳಗ ಬಲು ತುಂಬಿಹುದು
ಯಾರಿ ನಿನ್ನವರಲ್ಲಿ ಊರಿನಲ್ಲಲಿಗೊಡರು ೨.

ನಾಮಾಂಕಿತಕೆ ಮಾತ್ರ ಅಧಿಕಾರವೆನಗಿತ್ತೆ
ಸ್ವಾಮಿತ್ವವನು ನೋಡೆ ಮನೆಮನೆಯಲಿ
ಭೀಮ ವಿಕ್ರಮರವರು ದುರ್ಬಲಾಗ್ರಣಿ ನಾನು
ಗ್ರಾಮವೊಪ್ಪಿಸಿ ನಮಿಪೆ ಸಂಬಂಧ ತೆರವಾಡೊ ೩.

ಸಂಬಂಧ ವ್ಯಾಪಾರ ತಾವೆ ಮಾಡಿ - ಎನ್ನ
ಬಂಗೆ ಲೆಕ್ಕಕೆ ಮಾತ್ರ ಗುರಿಯ ಮಾಡಿ
ಕರೆಕರೆಯ ಪಡಿಸಬೇಕೆಂದು ಯೋಚಿಸುತಿಹರು
ಕರೆದು ವಿಚಾರಿಸಿ ನ್ಯಾಯ ಮಾಡಿಸು ದೊರೆಯೆ ೪.

ಕಾಲಕ್ಕೆ ಸರಿಯಬಂದವರಿಗೆ ಒಳಗಾಗಿ
ಪಾಳತಿಯುಳೊಪ್ಪಿಸಿ ಕೊಡುವೆವೆಂದು
ಆಲೋಚಿಸಿ ಇಹರು ಈಗಲೇ ನಿನ್ನ ನಿಜ
ಆಳುಗಳ ಒಲಮಾಡಿ ಎನ್ನ ರಕ್ಷಿಸೊ ದೊರೆಯೆ ೫.

ಕ್ಷಣಕೆ ನೂರುಪಟಳ ಈ ಕೋಟೆಗೆಲೊರಾಯ
ಅನುವಾದ ದಿವಸವೊಂದಾದರಿಲ್ಲ
ಎನಗಾರು ಬಲವಿಲ್ಲ ಇದ್ದವರು ವಶವಿಲ್ಲ
ಕೊನೆಗೊಂಡು ಗ್ರಾಮ ಕಾಪಾಡುವ ಬಗೆಯೆಂತೊ ೬.

ಎನಗೆ ಬಹು ಸಾಯಾಸಕರ ಈ ಕೊಂಪೆಯೊಳು ವಾಸ
ವನು ಬಿಡಿಸಿ ನಿನ್ನ ನಿಜಪಟ್ಟಣದೊಳು
ಮನೆಮಾಡಿ ಕೊಡಲು ನಾ ನಿನ್ನ ನೋಡಿಕೊಳುತ
ಅನುಗಾಲ ಬದುಕುವೆನೊ ಗೋಪಾಲವಿಠಲ ೭.

೮. ರಾಗ ಶಂಕರಾಭರಣ ಆದಿತಾಳ

ನಿನ್ನ ಸ್ವಾಮಿ ಎನ್ನ ಸರ್ವಸ್ವಾಮಿ
ನಿನ್ನ ರಹಿತ ಅಖಿಳ ಜಗದಂತರ್ಯಾಮಿ ಪ.

ಆವಗತಿಯೊ ಎನಗಾವಗತಿಯೊ
ಆವಗತಿಯೊ ಎನಗಾವಗತಿಯೊ ಅ.

ಒಂದ ಕಾರ್ಯವಾಗಲಿಲ್ಲ
ಇಂದು ಬ್ರಹ್ಮ ದೇಹ ಧರಿಸಿ
ಮುಂದೆ ಗತಿಯಾವುದಯ್ಯ
ಸಿಂಧುಶಯನ ಅರವಿಂದ ನಯನ ೧.

ನಿತ್ಯವಲ್ಲ ದೇಹ ಆಯು
ವ್ಯರ್ಥಕಳೆದು ಹೋಗುತ್ತಿದೆ
ಮತ್ತೆ ಈ ಪರಿಯ ಕಾಯ
ಬಾಹೊದೆಂತೊ - ನೀ ಕಾಪೋದೆಂತೊ ೨

ಹೇಸಿ ವಿಷಯ ಸುಖವ ನಾನು
ಲೇಸು ಎಂದು ತಿಳಿದು ಮಮತೆ
ಪಾಶದೊಳು ಕಟ್ಟು ಬಿದ್ದು
ಕ್ಲೇಶಪಡುವೆ - ಮೋಲಾಸೆಗೊಡುವೆ ೩.

ಪರರ ವಿತ್ತ ಪದವಿ ಕಂಡು
ಹರುಷ ಕ್ಲೇಶದೊಳು ಬಿದ್ದು
ಇರುಳು ಹಗಲು ಏಕವಾಗಿ
ಕೊಳಲುವೆನು - ಅತಿ ಬಳಲುವೆನು ೪.

ವಾಮ ಲೋಚನೆಯರ ಕಂಡು
ನಾ ಮನಸು ಕೂಟ ಮಾಡಿ
ಕಾಮಿಸುವೆ ಕಲುಷಿಯಾಗಿ
ನೇಮದಿಂದ - ಅತಿ ಪ್ರೇಮದಿಂದ ೫.

ಉನ್ಮತ್ತ ತನದಿ ಸಕಲ
ಸನ್ಮಾರ್ಗವ ಜರಿದು ಸತತ
ಮನ್ಮಥನ್ನ ಪೊಂದಿದೆನೊ
ನಿಮ್ಮ ಮರೆದು, ನಿಹಿತ ಧರ್ಮ ತೊರೆದು ೬.

ಧೈರ್ಯವಾಗದೆನಗೆ ಭಕ್ತ
ವರ್ಯರನ್ನು ಪೊಂದಲಿಕ್ಕೆ
ಚೌರ್ಯದಾಸನಾದೆ ಖ್ಯಾತ್ಯೈ
ಶ್ವರ್ಯಬಯಸಿ—ವಿಷಯ ಧುರ್ಯನೆನಿಸಿ ೭.

ಮತ್ತೆ ಉದರ ಬಾಧೆಗಾಗಿ
ಕೃತ್ಯದುಷ್ಟ ಮಾಡಿ ಪರರ
ಭೃತ್ಯನಾಗಿ ಪೋಪೆ ಕಿಂಚಿ
ದರ್ಥಕಾಗಿ—ಪುರುಷಾರ್ಥಸೀಗಿ ೮.

ನರಕ ವಾರ್ತೆ ಕೇಳಿ ಮನ
ವೆರಗಿಸುವೆ ವಿಷಯಗಳಿಗೆ
ನರಹರಿಯೆ ಕಾಯಬೇಕೊ
ಕರುಣದಿಂದ—ನಿನ್ನ ಸ್ಮರಣೆಯಿಂದ ೯

ಆಗದೆನಗೆ ಅಬುಜನಾಥ
ಭಾಗವತವ ಕೇಳೆ ಮನಸು
ಹೇಗೆ ನಾ ನಿನ್ನ ದಾಸ
ನಾಗುವೆನು—ಭವ ನೀಗುವೆನು ೧೦

ದೀನ ರಕ್ಷಕ ದಿವಿಜರೊಡೆಯ
ದಾನವಾರಿ ಜ್ಞಾನಪೂರ್ಣ
ವೇಣು ಗೋಪಾಲ ವಿಠಲ
ದಾಸಿ ಸಲಹೊ— ನಿನ್ನ ಧ್ಯಾನ ಬಲುಹೊ ೩.

೯. ರಾಗ ರೇಗುಪ್ತಿ ಝಂಪೆತಾಳ.

ಎನ್ನ ಬಿನ್ನಪ ಕೇಳೊ ಧನ್ವಂತ್ರಿ ದಯಮಾಡೊ
ಸಣ್ಣವನು ಅವಕೇವಲ ಪ.

ಬನ್ನ ಬಡಿಸುವ ರೋಗವನ್ನು ಮೋಚನವಮಾಡಿ
ಚೆನ್ನಾಗಿ ಪಾಲಿಸುವುದೊ, ವಿಭುವೆ ಅ.

ಆರೋಗ್ಯ ಆಯುಷ್ಯ ಐಶ್ವರ್ಯವೆಂಬೊ ದಿವ್ಯ
ಮೂರುವಿಧ ವಸ್ತುಗಳು
ನಾರಾಯಣನ ಭಜಕರಾದವರ ಸಾಧನಕೆ
ಪೂರಣವಾಗಿಪ್ಪುವೊ
ಘೋರ ವ್ಯಭಿಚಾರ ಪರನಿಂದೆ ವಿತ್ತಾಪ
ಹಾರಮಾಡಿದ ದೋಷದಿ
ದಾರಿದ್ರ್ಯರಾಗುವರೊ ಮೂರು ವಿಧದಿಂದಲಿ
ಕಾರಣನೆ ನೀನು ದುಷ್ಕರ್ಮ ಪರಿಹರಿಸುವುದೊ ೧

ವಸುಮತಿಯ ಮೇಲಿನ್ನು ಅಸುರ ಜನರೇ ಬಹಳ
ವಶವಲ್ಲ ಕಲಿಯ ಬಾಧೆ
ಹಸಿವಿಂದ ಪೀಡಿತವಾದ ಪಶುಗಳಂತೆ
ಶಿಶುಗಳು ನಾವಿಪ್ಪೆವೊ
ಅಸುದಾತ ನಿನ್ನ ಕರುಣಾವ್ಯೂಹದ ಮರೆಗರೆದು
ಕುಶಲದಲಿ ಪಾಲಿಸುವುದೊ
ಕೆಸರಿಂದ ಕೆಸರ ತೊಳೆದಂತೆ ಕರ್ಮದ ಪಥವು
ಅಸುನಾಥ ಹರಿಯೆ ಪೊರೆಯೊ ಸ್ವಾಮಿ ೨.

ಆಧಿವ್ಯಾಧಿಗಳು ಉನ್ಮಾದ ವಿಭ್ರಮನಾನಾ
ಬಾಧೆಗೌಷಧನು ನೀನೆ
ಹೇ ದೇವ ನಿನ್ನ ಕರಕಲಶ ಸುಧೆಯನು ಎರೆದು
ಸಾಧುಗಳ ಸಂತೈಸುವಿ
ಮೋದ ಬಡಿಸುವಿ ನಿನ್ನ ಸಾಧಿಸುವರಿಗೆ ಶು-
ಭೋದಯಂಗಳನು ಮಾಡಿ
ಆದರಿಸಿ ಇವಗೆ ತವಪಾದ ಧ್ಯಾನವನಿತ್ತು
ಸಾಧುಗಳೊಳಗಿಟ್ಟು ಮೋದಕೊಡು ಸರ್ವದ ೩.

ಅನ್ಯರನು ಭಜಿಸದಲೆ ನಿನ್ನನೆ ತುತಿಸುತ್ತ
ನಿನ್ನ ಚಿನ್ಹೆಗಳ ಧರಿಸಿ
ನಿನ್ನವರವನೆನಿಸಿ ನಿನ್ನ ನಾಮೋಚ್ಚರಿಸಿ
ನಿನ್ನಿಂದ ಉಪಜೀವಿಸಿ
ಅನ್ನ ಆರೋಗ್ಯಕ್ಕೆ ಅಲ್ಪ ಜೀವಿಗಳಿಗೆ
ಇನ್ನು ಅಲ್ಪರಿಯಬೇಕೆ
ನಿನ್ನ ಸಂಕಲ್ಪ ಭಕ್ತರನು ಪೋಷಿಪೆನೆಂಬ
ಘನ್ನ ಬಿರುದಿನ್ನು ಉಳುಹೋ ಸಲಹೊ ೪.

ನಿನ್ನವರಲಿ ಇವಗೆ ಇನ್ನು ರತಿಯನು ಕೊಡು
ನಿನ್ನವನೆಂದು ಅರಿದು
ನಿನ್ನ ನಾ ಪ್ರಾರ್ಥಿಸಿದೆ ಅನ್ಯರಿಗೆ ಅಲ್ಪರಿಯೆ
ಎನ್ನ ಪಾಲಿಸುವ ಧೊರೆಯೇ
ಎನ್ನ ಮಾತಲ್ಲವಿದು ಎನ್ನ ಹಿರಿಯರ ಮಾತು
ಮನ್ನಿಸಬೇಕೊ ಕರುಣಿ
ಅನ್ನಂತ ಗುಣಪೂರ್ಣ ಗೋಪಾಲ ವಿಠಲನೆ
ಇನ್ನಿದನು ಲಾಲಿಸಯ್ಯಾ ಜೀಯಾ ೫.

### ೧೦. ರಾಗ ಕಾಪಿ ಆದಿತಾಳ.

ಏಕೆ ಮಮತೆ ಕೊಟ್ಟು ದಣಿಸುವಿ ರಂಗ
ನೀ ಕರುಣವಿ ಎನ್ನ ಪಾಲಿಸೊ ಕೃಷ್ಣ ಪ.

ನಿನ್ನನು ಭಜಿಸಲು ಅನ್ಯವಿಷಯಂಗಳಿ
ಗೆನ್ನನೊಪ್ಪಿಸುವುದು ನೀತವೆ (=ನೀತಿಯೆ ?)
ಮನ್ನಿಸಿ ದಯದಿ ನೀನೆನ್ನ ಪಾಲಿಸದಿರೆ
ನಿನ್ನ ನೇಮಕೆ ಪ್ರತಿಕೂಲವೆ, ರಂಗ ೧.

ತನುವು ತನ್ನದು ಅಲ್ಲ ತನುಸಂಬಂಧಿಗಳಾರೊ
ತನುವಾರೊ ತಾನಾರೊ ಅವರಿಗೆ
ಧನ ಮೊದಲಾದ ವಿಷಯಗಳ ಅನುಭವ ಹಿಂ
ದಣ ಜನುಮದಂತಲ್ಲವೆ, ರಂಗ ೨.

ಇಂದ್ರಿಯಂಗಳ ವಿಷಯದಿಂದ ಛೇದಿಸೆ ಗೋ
ವಿಂದ ನಿನ್ನ ಮನಕೆ ಬಾರದೆ
ಇಂದಿರೆಯರಸ ಬ್ರಹ್ಮಾದಿವಂದಿತ ನಿನ್ನ
ಬಂಧಕ ಶಕುತಿಗೆ ನಮೋ ನಮೋ, ರಂಗ ೩.

ಅರಿತು ಅರಿತು ಎನಗರೆಲವವಾದರು
ವಿರಕುತಿ ವಿಷಯದಿ ಬಾರದು
ಕರುಣಾಸಾಗರ ನಿನ್ನ ಸ್ಮರಣೆ ಯೊಂದಲ್ಲದೆ
ಮರುಳು ನೀಗುವ ಬಗೆಗಾಣೆನೊ, ರಂಗ ೪.

ಎಂದಿಗೆ ಇನ್ನು ನಿನ್ನ ಚಿತ್ತಕ್ಕೆ ಬರುವುದೊ
ಅಂದಿಗೆ ಉದ್ಧರಿಸೊ ಕರುಣಿಯೆ
ಸುಂದರ ವಿಗ್ರಹ ಗೋಪಾಲ ವಿಠ್ಠಲ-ಸು
ಸಾಂದ್ರ ಭವಮೋಚಕ ನಮೋ ನಮೋ, ರಂಗ ೫.

## ೧೧ ಸುಳಾದಿ

### ಧ್ರುವತಾಳ

ನಿನ್ನ ಚಿತ್ತ ಎನ್ನ ಭಾಗ್ಯ ಇನ್ನು ಬೇರೆನಗಿಲ್ಲ
ಮನ್ನಣೆ ಅಮನ್ನಣೆ ನಿನ್ನದೊ ಸರ್ವೇಶ
ಚಿನ್ನ ಕೊಟ್ಟೆನೊ ನಿನಗೆ ಎನ್ನ ಏನನ್ನು ಮಾಡೊ
ಕಣ್ಣಿಲಿ ಕಂಡಷ್ಟು ಏನನ್ನ ಕೇಳೋಣ
ನಿನ್ನ ಬಣ್ಣಿಸಿ ನಾನು ಘನ್ನ ಬೇಡುವನಲ್ಲ
ಎನ್ನದೆಂಬಹಂಕಾರವನ್ನು ಬಿಡಿಸೊ ದೇವ
ಎನ್ನ ಸಂಕಲ್ಪವೆಲ್ಲ ನಿನ್ನ ಅಧೀನವಯ್ಯ
ನಿನ್ನ ಸಂಕಲ್ಪಕಿನ್ನು ಭಿನ್ನ ಭಿನ್ನಗಳಿಲ್ಲ
ನಿನ್ನಿಚ್ಛೆ ನೀ ಪ್ರೇರಕ ನಿನ್ನದೊ ಎನ್ನಭಾರ
ಇನ್ನು ಮುನ್ನೆಂದೆಂದು ಇನ್ನಿದೆ ಸಿದ್ಧವಯ್ಯ
ಇನ್ನೊಂದ ನಾನರಿಯೆ ಎನ್ನೊಡೆಯನೆ ಕೇಳೊ
ಮನ್ನವಚಕಾಯದಿ ಇನ್ನು ನಿನ್ನೇ ಹಾರೈಸಿ
ಬಿನ್ನಹ ಮಾಡಿದೆನೊ ನಿನ್ನನಿಲಿಸಿ ಕೊಂಡೇ
ಚಿನ್ಮಯ ಮೂರುತಿ ಗೋಪಾಲ ವಿಠ್ಠಲ
ನಿನ್ನಾ ಬೇಡುವೆನಲ್ಲದೆ ಅನ್ಯರಿಗಾಳ್ಪರಿಯೆ ೧

### ಮಠ್ಯತಾಳ

ನಿನ್ನಿಂದಲಿ ದತ್ತ ತನ್ನಾಗದ ವಸ್ತ
ಅನ್ನಂತ ಪಿತ್ರರು ಇನ್ನೊಲ್ಲೆ ಇನ್ನೊಲ್ಲೆ
ಅನ್ಯ ಕರ್ಮವ ಮಾಡಿ, ಅನ್ಯ ದೈವವ ಬೇಡಿ
ಎನ್ನುದರ-ಪೂರ್ತಿ, ಇನ್ನು ಮಾಳ್ಪದಕಿಂತ
ಬನ್ನಾಗೆಟ್ಟವನಾಗಿ ಅನ್ಯ ವಿಷಯ ಬಿಟ್ಟು
ನಿನ್ನವನಾಗಿನ್ನು ಅನ್ಯವಿಲ್ಲದೆ ಅ-

ರನ್ನ್ಯಾವ ಸೇವನ್ನು ಹಣ್ಣು ಹಂಪಲು ಪೊದ್ದು
ನಿನ್ನ ವಿಷಯ ಕರ್ಮ ನಿನ್ನ ವಿಷಯ ಧರ್ಮ
ಇನ್ನೇನಾದದ್ದು ನಿನ್ನ ಪರವವಾಗಿ
ಎನ್ನ ಇಡಿಸಿದರೆ ಘನ್ನುಪಕಾರವು
ಇನ್ನೆಂದಿಗ ಮರಿಯೆ ಚಿನ್ಮಯಮೂರುತಿ
ಗೋಪಾಲ ವಿಠ್ಠಲ
ನಿನ್ನ ಚಿತ್ರಿಕೆ ಬಾರ ದಿನ್ನೆಂದಿಗೂವಲ್ಲೆ ೨

ರೂಪಕತಾಳ

ಹಾಗೆ ಇತ್ತೇ ಇನ್ನು ಹಾಗೆ ಆಗಲಿ ದೇವ
ಹೀಂಗೆ ಇತ್ತೇ ಇನ್ನು ಹೀಂಗೆ ಆಗಲಿ ದೇವ
ಹಾಗೆ ಹೀಂಗೆ ಇನ್ನು ಎರಡು ಆಗಲಿ ದೇವ
ಆಗ ಅಂಜಿದ ನಾರು ಈಗ ಅಳುವ ನಾರು
ಆಗುವಂಥಾ ಕಾರ್ಯ ಆಗಲೀಸನು ಯಾರು
ಆಗದಂಥಾ ಕಾರ್ಯ ಆಗುಮಾಡುವನಾರು
ಬಾಗುವೆ ನಿಮ್ಮ ಚರಣಂಗಳಿಗೆ ನಾನು
ಹೇಗಾದರು ಲೇಸೆ ನೀನಿತ್ತ ಭಾಗ್ಯಕ್ಕೆ
ಹೋಂಗ್ಯೊರಡೊಂದರ ಆಗೋದೇನನ್ನಿಂದ
ಸಾಗಿ ಸಾಗಿ ಇನ್ನು ಕೂಗೆ ಕೊಟ್ಟಿಲು
ಹೋಗಿ ಹೋಗಿ ತನ್ನ ಸ್ಥಳಕೆ ನಿಲ್ಲುವುದು
ಸಾಗರಶಯನ ಗೋಪಾಲವಿಠ್ಠಲ ತಿಳಿಯೆ
ಭೋಗ ತೀರಿಸಿ ದೋಷ ಯಾಗ ಮಾಡೊ ದೇವ ೩

ಝಂಪೆತಾಳ

ನೀ ನಿತ್ಯ ನಾನಿತ್ಯ ಅನಾದಿ ಕಾಲದಲಿ
ಏನು ಆಗುವ ಪ್ರೀತಿ ನಿನ್ನಿಂದಲೆನಗೆ
ಕಾಣುವುದೊಂದುಂಟೆ ನಿನ್ನ ಕಂಡವಂಗೆ

ಜಾಣತನವೇಕೆ ಎನ್ನೊಡನೆ ಛಲಬೇಡ
ಪ್ರಾಣರಿಗೊಂದೊಂದು ಅನಿತ್ಯ ವಸ್ತುಗಳಲಿ
ಏನು ಭ್ರಮೆ ಪುಟ್ಟಿಸಿ ಮರುಳು ಮಾಡುವೆ ದೇವ
ಶ್ರೀನಾಥ ಸಾಹಸಕ್ಕೆ ಏನು ಏನೆಂಬೆನೊ
ಧೇನಿಸಿ ನೋಡೆ ಶತಾನಂದಗೊಶವಲ್ಲ
ಕಾಣುವನೆನ್ನಂಥ ನರಗುರಿ ನಿನ್ನನು
ಶ್ರೀನಿವಾಸನೆ ನಮೋ ನಮೊ ಎಂಬೆನೊ
ದೀನ ರಕ್ಷಕ ದೇವ ಗೋಪಾಲ ವಿಠ್ಠಲ
ನೀನು ಕುಣಿಸಿದಂತೆ ನಾನು ಕುಣಿವೆನಯ್ಯಾ

ತ್ರಿಪುಟತಾಳ

ವಾಸುದೇವನೆ ನಿನಗೆ ವಾಸಿಪ್ರೊಂದೇ ಕೇಳು
ಈಶನೆಂಬ ಪೆಸರು ನಿನ್ನದಯ್ಯ
ದಾಸನೆಂಬ ಪೆಸರು ನಿನಗೆ ಎಂದಿಗೂ ಇಲ್ಲ
ದಾಸತ್ವ ತನವೆಲ್ಲ ನಮ್ಮದಯ್ಯ
ದಾಸರು ಇಲ್ಲದ ಈಶತ್ವ ಪ್ರಕಟಸದು
ಈಶನು ಇಲ್ಲದ ದಾಸತನವ್ಯಾಕೆ
ದೇಶಕಾಲ ಪಾತ್ರ ಈಸುಕೂಡಿದಲ್ಲಿ
ಕಾಸು ಕೊಡುವದಾತರಿಲ್ಲದಿರೆ
ಕಾಸು ಇದ್ದವನಲ್ಲಿ ದೇಶ ಪೋಗುವುದು
ದೇಶವಿದ್ದಲ್ಲಿ ಕಾಸು ಬಾಹುವುದೆ
ದಾಸತ್ವ ಎನ್ನಲ್ಲಿ ಈಷಣ್ಮಾತ್ರವನು
ಆಶ್ರಯಿಸಿ ಇತ್ತ ಈಶ ನೀ ಎನಗುಂಟು
ದೇಶ ದೇಶದವರು ಏಸು ಕಾಲಕೆ ಕುರುಹು
ಮಾಸದೆ ಕಂಡರೆ ಪೋಷಿಸುವರು ಬಿಡದೆ
ಲೇಸಾಗಿ ಇಬ್ಬರು ಒಂದೇ ಸ್ಥಳದಲ್ಲಿ
ವಾಸವಾಗಿ ಇದ್ದು ನಾಶರಹಿತರಾಗಿ

ಕ್ಲೇಶಕೊಬ್ಬನವಮಾಡಿ, ಕ್ಲೇಶರಹಿತನಾಗಿ
ಘಾಸಿಪಡಿಸಿ ನಮ್ಮ ಮೀಸಲಾಗಿ ನೀನಿಂದು
ದೋಷರಹಿತ ರಂಗ ಗೋಪಾಲವಿಠ್ಠಲ
ದಾಸರಪಿಡಿದಿರು ಏನೇಸು ಒಂದರು ೫

ಅಟತಾಳ

ಧನದಿಂದ ನೆಂಟರು ಕೆಲವರು ಎನಗಿನ್ನು
ತನುವಿನ ನೆಂಟರು ಕೆಲವರು ಎನಗಿನ್ನು
ಮನದಿಂದ ನೆಂಟರು ಕೆಲವರು ಎನಗಿನ್ನು
ಏಸವಿಂದ ನೆಂಟರು ಕೆಲವರು ಎನಗಿನ್ನು
ಗುಣದಿಂದ ನೆಂಟರು ಕೆಲವರು ಎನಗಿನ್ನು
ಇನಿತು ನೆಂಟರೊಳು ಎನಗೆ ಒಬ್ಬರ ಕಾಣೆ
ಅನುವಾಗಿ ಇದ್ದರೆ ಅಷ್ಟು ನಮ್ಮವರೆಲ್ಲ
ಅನುವು ತಪ್ಪಿದರಿನ್ನು ಆರು ನಮ್ಮವರಿಲ್ಲ
ನಿನಗೆ ಎನಗೆ ನೆಂಟತನವಿನ್ನು ಹೀಗಲ್ಲ
ಅನಿಮಿಷವಗಲದ ಅನಿಮಿತ್ತ ಬಾಂಧವನಾಗಿ
ಕ್ಷಣಬಿಡದಲೆ ಕಾಯ್ವ ಗೋಪಾಲ ವಿಠ್ಠಲ
ನಿನಗೆ ಮಾಡುವದೇನೊ ನಮೋ ನಮೋ ಎನ್ನಿಂದ ೬

ಆದಿತಾಳ

ನೀನೇವೆ ವೈಕುಂಠ ನೀನೇವೆ ಮುಕ್ತಿ ಎನಗೆ
ನೀನೇವೆ ಸಕಲ ತೀರ್ಥಯಾತ್ರೆಗಳೆನಗೆ
ನೀನೇವೆ ಇಹಪರದಲ್ಲಿ ಕಾಯುದವ
ನಾನೆಲ್ಲಿ ನೋಡಲು ನೀನೆ ಕಾಣಿಸುವಿ
ನೀನಿದ್ದ ಸ್ಥಳದಲ್ಲಿ ಸಕಲದೇವತೆಗಳು
ನೀನೇವೆ ಫಲಗಳ ಸಕಲರಲ್ಲಿಪ್ಪೀವೆ
ನೀನರಕ್ಷಕ ದೇವ ಗೋಪಾಲ ವಿಠ್ಠಲ
ಜ್ಞಾನಿಗಳಿಗೆ ಪ್ರಿಯ ನೀನೆ ಜ್ಞಾನಿಪ್ರಿಯ ೭

ಜತೆ

ಕಾಣದವನು ನಿನ್ನ ಕಂಡದ್ದಾಶ್ಚರ್ಯಸುವ
ಕಾಣುವ ಬಿಡ ನಿನ್ನ ಗೋಪಾಲ ವಿಠ್ಠಲ

೧೨. ರಾಗ ಧನ್ಯಾಸಿ ಛಾಪುತಾಳ

ಏನ ಬೇಡಲೊ ನಿನ್ನ ಬಳಿಗೆ ಬಂದು ಪ.

ನೀನಿತ್ತ ಸೌಭಾಗ್ಯ ನಿಬಿಡವಾಗಿದೆ ಎನಗೆ ಅ.

ಜನನಿಯು ಕೊಡುಯೆಂದು ಜಗದೀಶ ಬೇಡುವೆನೆ
ಜನನಿಯೇನಿತ್ತಳಾ ಧ್ರುವರಾಯಗೆ
ಜನಕನ ಕೊಡುಯೆಂದು ಜಯವಂತ ಬೇಡುವೆನೆ
ಜನಕನೇನಿತ್ತನಾ ಪ್ರಹ್ಲಾದಗೆ ೧

ಅನುಜನಾ ಕೊಡುಯೆಂದು ಅತಿಶಯದಿ ಬೇಡುವೆನೆ
ಅನುಜನೇನಿತ್ತನೈ ಆ ವಾಲಿಗೆ
ಧನವನೇ ಕೊಡುಯೆಂದು ದೈನ್ಯದಲಿ ಬೇಡುವೆನೆ
ಧನಗಳಿಸಿದ ಸುಯೋಧನ ನೇನಾದ ಕೊನೆಗೆ ೨

ಸತಿಯಳ ಕೊಡುಯೆಂದು ಮತಿವಂತ ಬೇಡುವೆನೆ
ಸತಿಯಿಂದ ದ್ಯುನಾಮ ವಸು ಏನಕಂಡ
ಸುತರನೇ ಕೊಡುಯೆಂದು ಸುಖಿಸಿನಾ ಬೇಡುವೆನೆ
ಸುತರಿಂದ ಧೃತರಾಷ್ಟ್ರ ಗತಿಯೇನು ಕಂಡ ೩

ಬಂಧುಗಳ ಕೊಡುಯೆಂದು ಚೆಂದದಲಿ ಬೇಡುವೆನೆ
ಬಂಧುಗಳೇನಿತ್ತರಾ ಗಜರಾಜಗೆ
ಅಂದಣವ ಏರುವ ಭಾಗ್ಯವ ಬೇಡುವೆನೆ
ಅಂದಣೇರಿದನಹುಷ ಏನಾದ ಕೊನೆಗೆ ೪

ಬೇಡುವೆನೊ ನಾನೊಂದು ಬೇಡತಕ್ಕುದ ದೇವ
ನೀಡೆನೆಂಬುದು ನಿನ್ನ ಮನದೊಳಿತ್ತು
ಮೂಢಲಾದ್ರೀಶ ಗೋಪಾಲ ವಿಠ್ಠಲರೇಯ
ಜೋಡದಂದದಿ ಪಾರುಮಾಡಯ್ಯ ಧೊರೆಯೆ ೫

೧೨. ರಾಗ ಕಾಂಬೋದಿ ಝಂಪೆತಾಳ

ಏಕೆ ಭಿಕ್ಷವೃತ್ತಿ ಚರ್ಮ ಹೇಳ ನಿನಗೆ ಪ.
ಶ್ರೀಕಂಠ ನಿನ್ನಷ್ಟು ಸಹಾಯ ಒಬ್ಬರಿಗಿಲ್ಲ ಅ.

ಕನಕಾಚಲವೆ ನಿನ್ನ ಕರದೊಳಗಿಹ ಧನವು
ಮನೆಯು ರಜತಾಚಲವು ಅನ್ನಪೂರ್ಣೆ
ನಿನಗೆ ಪಟ್ಟದರಾಣಿ ಲೋಕವಿಘ್ನವ ಕಳೆವ
ಗಣನಾಥ ನಿನ್ನ ಮಗ ಶಿವರೂಪಿ ನೀನು ೧

ರಾಜಶೇಖರ ನೀನು ಸಕಲ ಲೋಕಾಧ್ಯಕ್ಷ
ರಾಜರಾಜನು ನಿನಗೆ ಪರಮಸಖನು
ಮೂಜಗತ್ಪಾವನಳು ಸುರಗಂಗೆ ಜಡೆಯೊಳಗೆ
ಸೋಜಿಗವಿದೇನಯ್ಯ ಜಗದೊಳಗೆ ಶಂಕರನೆ ೨

ತ್ರಿಣಯನನು ನೀನು ಪಂಚಾಸ್ಯ ಬ್ರಹ್ಮನ ಮಗನು
ನಿನಗೊಬ್ಬ ಮಗನಿಹನು ಆರು ಮೊಗನು
ಅನಿಮಿಷ ಪ್ರಿಯ ಗುರು ಗೋಪಾಲವಿಠ್ಠಲ
ನಿನಗೆ ಅತ್ಯಂತ ಸುಪ್ರಿಯನಾಗಿರಲು ದೇವ ೩

೧೩. ರಾಗ ಸಾವೇರಿ ಆದಿತಾಳ

ಏನಯ್ಯ ಶ್ರೀಕೃಷ್ಣ ನಿನ್ನಾಧೀನ ತನದ ಘನತೆಯ
ಕಾಣೆನೀಗ ಲೇಶಕೊನೆಗೆ ಏನಮಾಡುವಿ ತಿಳಿಯದೊ ಪ.

ಅನಾದಿ ಕಾಲದಿಂದ ಅನು ನಿನ್ನಾಧೀನನಾಗಿ
ಏನು ಪರಿಯಲಿ ನೀನು ಮಾಡಿಸಿದಂತೆ ಮಾಡಿದೆನಲ್ಲದೆ
ಹಾನಿವೃದ್ಧಿ ಹರುಷಕ್ಲೇಶ ನಾನಾಭವಣೆಗೆ ಎನ್ನನೊಪ್ಪಿಸಿ
ನೀನು ಸಿಗದಲೆ ಅನ್ಯನಂತಿರ ಜಾಣತನದ ಪರಿಯಿದೇನೈ ೧

ಹುಟ್ಟಹೊಂದಿ ಬೇಡಿ ಬಳಲುವ ಕೆಟ್ಟ ಸಂಸೃತಿ ಪಾರತಂತ್ರ್ಯದ
ಕಷ್ಟಗಳ ಅನುಭವವು ನಿನಗೊಂದಿಷ್ಟು ಇಲ್ಲದಕಾರಣ
ಎಷ್ಟು ಪರಿಯಲಿ ಅಲ್ಪರಿದು ಮೊರೆಯಿಟ್ಟು ಕೂಗಲು ನಿನಗೆ ದಯವು
ಪುಟ್ಟಪಾಯಿತೆ ಪುಣ್ಯಪುರುಷ ಶ್ರೀ ಕೃಷ್ಣ ಕೀರ್ತಿವಿಲಾಸನೆ ೨

ಮೋದಲಾಭ ಏದೇನೆಂದು ಈ ಧರೆಗೆ ಬಂದು ನಿನ್ನ
ಆದರಿಸಿ ಹಾಡಿ ಪಾಡಿ ನಡೆದು ನುಡಿದೆನಲ್ಲದೆ
ಮೋದಲಾಭವೇನು ಕಾಣೆನೊ ಮೊದಲಗಂಟಿಗೆ ಮೋಸಬಂದಿತು
ಕ್ರೋಧಲೋಭ ಮೋಹಕೆ ವಶನಾಗಿ ನಿನಗೆ ದೂರನಾದೆ ೩

ಹಿಂದೆ ಅರನು ಕೇಳಿ ಪೊರೆದೆ ಇಂದು ಅರನು ಕೇಳಿ ಜರೆದೆ
ತಂದೆ ಈಪರಿ ಕ್ಷಣಿಕತನಮಾಡೆ ಮುಂದಿನಗತಿ ಮಹಾತ್ಮನೆ
ಹಿಂದೆ ನಿನ್ನವ ಇಂದು ಅರವ ಎಂದಿಗೂ ನಿನ್ನ ಪಾದಯುಗಳವ
ಹೊಂದಿದವ ನಾನಾದಡೆ ದಯದಿಂದ ಪಾಲಿಸಬೇಕಯ್ಯ ೪

ಕಾಲದೇಶವಿದ್ಯ ಕರ್ಮಜಾಲದಲ್ಲಿ ಎನ್ನ ಬಂಧಿಸಿ
ಲೀಲೆ ಮಾಡುವಿ ನೀನು ಸಿಗದಲೆ ಮೇಲು ಇದು ನಿನ್ನ ಘನತೆಯೆ
ಮೂಲಕಾರಣ ಮುಖ್ಯನೀನೆಂದು ಶೀಲಬಲ್ಲವ ನಿನ್ನ ಬಿಡೆ – ಪರಿ
ಪಾಲಿಸುವುದು ಉಚಿತ ಗುರು ಗೋಪಾಲ ವಿಠ್ಠಲ ವೆಂಕಟ ೫

೧೪. ರಾಗ ನವರೋಜು ಆದಿತಾಳ

ಏನು ಗತಿಯೋ ಕೃಷ್ಣಯ್ಯ ಪ.

ನಿನ್ನ ಪರವನಯ್ಯ ಅ.

ನಿನ್ನ ಬಿಟ್ಟು ಮನವನ್ಯಕೆರಗಿ ಬಲು
ಬನ್ನ ವಿಷಯ ಸುಖವನ್ನು ಬಯಸುತಿದೆ
ಕನ್ನೆಯಂತೆ ಮನೆಮನೆಗೆಳೆಸುತಲಿ
ಎನ್ನ ದಣಿಸುತಿದೆ ಇನ್ನೇನಯ್ಯ ೧

ಇಂದಿರೇಶ ಈ ಇಂದ್ರಿಯವೃಂದಗ
ಳೊಂದೊಂದರ ಚಕ್ಕಂದವಿದೇನೈ
ಹೊಂದಗೊಡದು ತವ ದ್ವಂದ್ವ ಪಾದಗಳ
ತಂದೆ ಇದಕೆ ಗತಿ ಮುಂದೇನಯ್ಯ ೨

ಪರಸತಿಯರನಪ್ಪಿ ಥರಥರ ನಡುಗದೆ
ಹರುಷದಿಂದವರಲ್ಲಿ ಎರಗುತಿದೆ ಮನ
ಹರಿಯೆನಗೀಪರಿ ಮರುಳುಹಚ್ಚಿ ನೀ
ನರಿಯದಂತಿರುವುದು ಥರವೇನೈಯ ೩

ಸಾರಿದೆನಾನೆಲೊ ಸಾರಹೃದಯ ನಿ
ಸ್ಸಾರದ ಈ ಸಂಸಾರ ಶರಧಿಯೊಳ್
ಪಾರಗಾಣದಲೆ ಚಾರಿವರಿದೆ ಕಂ
ಸಾರಿ ಎನ್ನ ನೀ ದೂರಮಾಡಿದರಿನ್ ೪

ತಡೆಯದೆ ಕೇಳೆನ್ನೊಡೆಯ ಶೋಕದಿಂ
ಕಡೆಹಾಯಿಸು ನಿನ್ನಡಿಗಳಿಗೆರಗುವೆ
ನಡೆಸೆ ನಡೆವೆ ನೀನುಡಿಸೆ ನುಡಿವೆ ಸಂ
ಗಡಿಯ ಕರುಣೆ ನೀ ಕಡೆನೋಡಿದರಿನ್ ೫

ಮಂಗಳಾಂಗ ಸಿರಿ ರಂಗ ಎನ್ನ ಶ್ರಮ (–ಭವ. ಪಾ.)
ಹಿಂಗಿಸು ಅಜಮಿಳ ಗಂಗಾಸುತ ಮಾ
ತಂಗಾದಿಗಳಿಗೆ ಮಂಗಳವಿತ್ತ ಕೃ
ಪಾಂಗ ನಿನ್ನಯ ಡಿಂಗರಿಗನಿಗಿನ್ ೬

ಶರಣಾಗತರನು ಪೊರೆವನೆಂಬ ತವ
ಬಿರುದು ಲೋಕದೊಳು ಮೆರೆಯುತಿರೆ ಎನ್ನ
ಪೊರೆವುದು ನಿನಗಾಶ್ಚರ್ಯವಲ್ಲ ಸಿರಿ
ವರದ ಗೋಪಾಲ ವಿಠ್ಠಲ ಪ್ರಭುವೆ (ನಿಜವರದ. ಪಾಠಾಂತರ) ೭

೧೫. ರಾಗ ಮಧ್ಯಮಾವತಿ ಅಟತಾಳ

ಏನೆಂದು ಬಿನ್ನೈಸಲೈಯ್ಯ, ಎನ್ನಮನ
ನಿನ್ನ ಧೇನಿಸಲೊಲ್ಲದು ಪ
ಶ್ರೀನಿವಾಸ ಸುರದ್ರುಮನೆ ಭ
ಕ್ತಾನು ಕಂಪಿ ನೀನು ಕರುಣಿಸು ಅ.

ಇಲ್ಲದ ಚಿಂತೆಗಳ ಚಿಂತಿಸಿ ಮನ
ಅಲ್ಲ ತಿಂದಿಲಿಯಂದದಿ
ತಲ್ಲಣಿಸುತ್ತಿದೆ ತಾವರೆಯೆಲೆಯಲ್ಲಿ
ನಿಲ್ಲದುದಕ ಬಿಂದುವಿನ ತೆರದಂತೆ ೧

ಸೆಳೆದು ಸೆಳೆದು ನಿನ್ನ ಪಾದದಿ ಮನ
ಘಳಿಗೆ ಧೇನಿಸು ಎಂದರೆ
ಕಳವಳಿಸುತಲಿದೆ ಕಂಡಕಂಡ ವಿಷಯು
ಕ್ಕೆಳೆವುತಲಿದೆ ಎನ್ನ ಏನುಮಾಡಲಿ ೨

ಪರರ ಸಂಪದವ ಕಂಡು ಸೈರಿಸದಲೆ
ಪರಮಾಸೂಯವ ಪಡುತ
ಕರೆಕರೆಯು ತನ್ನೊಳಗೆ ತಾ ಪಡುತ ಈ
ತೆರದಲ್ಲಿ ಇಪ್ಪುದೊ ಎನ್ನಯ ಮನವು ೩

ಮನದಾಸೆಗೇನೆಂಬೆನು, ಪೇಳಲು ಲಜ್ಜಾ
ಮನಸಿಜನ್ನೈಯ ಕೇಳೊ
ನೆಣಿಸಿ ನೆಣಿಸುತ ಶಾಂತವಾಗದೆ
ದಣಿಸುತಿದೆ ಧನದಾಸೆಯಿಂದ ೪

ಪಂಚವೃತ್ತ್ಯಾತ್ಮಕದ ಈ ಮನದ ಪ್ರ
ಪಂಚಪಲ್ಲವು ನಿನಗೆ
ವಂಚನೆಯಿಲ್ಲದೆ ಒರೆದು ಪೇಳಿದೆ ವಿ
ರಿಂಚವರದ ಗೋಪಾಲ ವಿಠ್ಠಲ ೫

೧೬. ರಾಗ ಪಂತುವರಾಳಿ ಅಟತಾಳ

ಕಾಯೊ ಕಾಯೊ ಕಾಯೊ ವರವೀಯೊ ಪ.

ಕಾಯೊ ಕಾಯೊ ವರವೀಯೊ ವಿಜಯಗುರು
ರಾಯ ನೀನಲ್ಲದುಪಾಯಮತ್ತಿಲ್ಲ ಅ.

ತಾಪತ್ರಯ ಬಲು ದೀಪನವಾಗಿದೆ
ನೀ ಪರಿಪಾಲಿಸವೀಪರಿ ಥರವೆ ೧

ಪಾಪಗಳೆಣಿಸದೆ ಪಾವನ ಮಾಳ್ಪುದು
ಶ್ರೀಪತಿ ಪಡೆದ ಸುರಾಪಗದಂತೆ ೨

ಸ್ವೀಕಾರ ಮಾಡು ನಿರಾಕರಿಸದೆ ಬಲು
ವ್ಯಾಕುಲನಾಗಿಹೆ ನೀ ಕರುಣದಲಿ ೩

ದೂರ ನೀ ನೋಡಲು ಆರು ಇಲ್ಲವೊ ಗತಿ
ಕಾರುಣ್ಯದಿಂದ ನಿವಾರಿಸೊ ದುರಿತ ೪

ಒಂದರಿತವನಲ್ಲ ಇಂದಿರೇಶನ ಪದ
ದ್ವಂದ್ವವ ತೋರೊ ಹೇ ತಂದೆ ಕರುಣವಿ ೫

ಮಾನವರೊಳಗೆಲ್ಲ ಈ ನರ ಮೂರ್ಖನು
ಏನು ಅರಿಯ ಬಲು ದೀನನಾಗಿಹನು ೬

ಆಲಸ್ಯ ತಾಳದು ಪಾಲಿಸು ವೇಣು ಗೋ
ಪಾಲನ ವಿಠಲನ ಆಳು ಕೃಪಾಳು ೭

೧೭. ರಾಗ ಮುಖಾರಿ ಆದಿತಾಳ

ಕಾಯೋ ಶ್ರೀ ನಾರಸಿಂಹ ಕಾಯೊ ಜಯನಾರಸಿಂಹ ಪ.

ಕಾಯೋ ಶ್ರೀ ನಾರಸಿಂಹ ತ್ರ್ಯಯಂಬಕಾದ್ಯಮರೇಶ
ಭಯಾಂಧತಿಮಿರ ಮಾರ್ತಾಂಡ ಶ್ರೀ ನಾರಸಿಂಹ ಅ.

ಘೋರ ಅಕಾಲಮೃತ್ಯು ಮಾರಿ ಬರಲು ಕಂಡು
ಧೀರ ನೀ ಬಿಡಿಸದಿನ್ನಾರೋ ಶ್ರೀ ನಾರಸಿಂಹ ೧

ಧಿಷಣನೆ ಸುಭದ್ರ ದೋಷ ಮೃತ್ಯುಗೆ ಮೃತ್ಯು
ಸುಷುಮ್ನಾ ನಾಡಿಸ್ಥಿತ ವಿಭುವೆ ಶ್ರೀ ನಾರಸಿಂಹ ೨

ಜ್ಞಾನ ರಹಿತನಾಗಿ ನಾನಿನ್ನ ಮರೆತರೆ
ನೀನು ಮರೆತದ್ದೇಕೊ ಪೇಳೋ ಶ್ರೀನಾರಸಿಂಹ ೩

ಪ್ರಬಲೋತ್ತಮನೆನಿಸಿ ಅಬಲರ ಕಾಯದಿರೆ
ಸುಬಲರು ಕಂಡು ಮೆಚ್ಚುವರೆ ಶ್ರೀ ನಾರಸಿಂಹ ೪

ಪಾಲಮುನ್ನೀರಾಗಾರ ಪದುಮ ಮನೋಹರ
ಗೋ - ಪಾಲ ವಿಠಲ ಜಗತ್ಪಾಲ ಶ್ರೀ ನಾರಸಿಂಹ ೫

೧೮. ರಾಗ ರೇಗುಪ್ತಿ ಆದಿತಾಳ

ಕಮಲ ಮುಖಿಯೆ ಕಮಲಾಲಯೆ ಕಮಲೆ
ಕಮಲಾಕ್ಷಿಯೆ ಕೋಮಲೆ ಪ.

ಕಮಲನಾಭನ ಪಾದ ಕಮಲಯುಗಳ ಮಧುಪೆ
ಕಮಲಜ ಜನನಿಯೆ ಕಮಲ ಮಿತ್ರ ಪ್ರಭೆ ಅ.

ಅರುಣನ ಪೋಲುವ ಚರಣವು ಬಾಲ ಚಂ
ದಿರನ ಸೋಲಿಪ ನಖವು
ಬೆರಳಲ್ಲಿ ಪಿಲ್ಯ ಕಾಲುಂಗುರ ಮೆಂಟಿಕೆ
ಕಿರುಗೆಜ್ಜೆಂದಿಗೆ ಪೆಂಡೆಯು

ಕರಿಯು ದಂತದಂತೆ ಜಾನುದರ್ಪಣ ಜಂಘೆ
ಉರದ ದಟ್ಟಿಯು ನೆರಿಗೆಯು
ಹರಿನಡು ಕಿಂಕಿಣಿ ಭರದಿ ಒಡ್ಯಾಣವು
ದರತ್ರಿವಳಿ ರೇಖೆವರ ಕಂಚುಕಧಾರಿ ೧

ಕರಿಯು ಸೊಂಡಿಲಿನಂತೆ ಕರದೊಳಗೊಪ್ಪುವ
ಬೆರಳ ಮಾಣಿಕ್ಯದುಂಗುರ
ಹರಡಿ ಕಂಕಣ ವಂಕಿ ಬಿರುದಿನ ತೋಳ್ಬಂದಿ
ವರಭುಜ ಕೀರ್ತಿಕೇಯೂರ
ಕೊರಳಲ್ಲಿ ಒಪ್ಪುವ ಸರಗಳು ಪದಕವು
ವರ ವೈಜಯಂತಿ ಮಂದಾರ
ಮೆರೆವ ಚುಬುಕ ಬಿಂಬಾಧರ ಕೂರ್ಮಕದಪಿನ
ಕಿರಿದಾಂತ ರತುನದ ಕರಡಿಗೆ ವದನ ೨

ಸುರಭಿ ಚಂಪಕ ನಾಶಿಕ ಮೂಗುತಿ ಶಾಂತ
ಪರಮ ಕರುಣ ನೋಟದ
ಹರಿಣನಯನ ಪುರ್ಬುಸ್ಮರನ ಚಾಪದಂತೆ
ಕರಣಕುಂಡಲ ಪ್ರಭೆಯು
ಸಿರಿಕುಂಕುಮ ಕಸ್ತೂರಿ ತಿಲಕದ ಮೇಲೆ
ಅರಳೆಲೆ ಬೈತಲೆಯು
ಕುರುಳು ಸುಳಿಯು ಪರಿಪರಿ ರತ್ನಖಚಿತದ
ವರಮುಕುಟವು ಕೋಟಿ ಅರುಣನಂತೊಪ್ಪುವ ೩

ತೆತ್ತೀಸಕೋಟಿ ದೇವತೆಗಳು ವಾಣಿ ಭಾ
ರತಿ ಮೊದಲಾಗಿರುವ
ಉತ್ತಮ ಸ್ತ್ರೀಯರು ಛತ್ರ ಚಾಮರಗಳ
ನೆತ್ತಿ ಬೀಸುವ ವೈಯಾರ

ಸುತ್ತ ಗಂಧರ್ವ ತುಂಬುರುನಾರದರು ಸ್ವರ
ವೆತ್ತಿ ಪಾಡುವ ಝೇಂಕಾರ
ತದ್ಧರಿತರಿಕಿಟ ಝಣುತ ಝಣುತ ಯೆಂದು
ಎತ್ತ ನೋಡಿದರತ್ತ ತತ್ಥೈಶಬ್ದ ೪

ಪಕ್ಷಿವಾಹನನಾದ ಪಾವನ ಮೂರ್ತಿಯುಂ
ವಕ್ಷಸ್ಥಳದಿ ಶೋಭಿತೆ
ಲಕ್ಷ್ಮೀದೇವಿಯು ಸಹಲಕ್ಷಣೆ ಅಜ ಫಾ
ಲಾಕ್ಷಾದಿ ಸುರ ಸೇವಿತೆ
ಮೋಕ್ಷದಾಯುಕಿ ಲೋಕರಕ್ಷಕಿ ರಮಾದೇವಿ
ಇಕ್ಷುಧನ್ವನ ಮಾತೆ
ಅಕ್ಷಯ ಫಲದ ಗೋಪಾಲ ವಿಠ್ಠಲನ ಪ್ರ
ತ್ಯಕ್ಷ ತೋರಿಸೆನ್ನಪೇಕ್ಷೆ ಪೂರೈಸೆ ೫

೧೯. ರಾಗ ಮುಖಾರಿ ಝಂಪೆತಾಳ

ಕೊಟ್ಟ ಬಿಡಾರದಲಿ ಎಷ್ಟು ದಿನ ಜೀವಿಸಲೊ
ಕಷ್ಟಪಡಲಾರೆ ಹರಿಯೆ ಪ
ಕೋಟಲೆಯು ಸಂಸಾರ ಸಾಗರದಿ ಸಿಲುಕಿನಾ
ಸಾಟು ಬಡಲಾರೆ ಹರಿಯೆ ಅ.

ಕಟ್ಟುಗಳು ಸಡಲಿದುವು ಬಳೆಮೊಳೆ ಕದಲಿದವು
ನೆಟ್ಟ ಕಂಭಗಳು ಕುಸಿದುವು
ತೊಟ್ಟಿ ಪಡಸಾಲೆಗಳು ಒಟ್ಟ ಬಯಲಾದುವು
ಕಟ್ಟಿ ಹೊದ್ದಿಸಲಾರೆನೊ ಸ್ವಾಮಿ ೧

ಆರೆರಡು ಹಾರಿದುವು ಹಾರಿಹೋಯಿತು ಹೊದಿಕೆ
ಜಾರಿ ಬಿದ್ದುವು ಗಳುಗಳು
ಆರು ಮೂರೆಂಬ ತಲೆಬಾಗಿಲೆಲ್ಲವು ಕುಸಿದು
ಸೋರುತಿದೆ ನಾಲ್ಕು ಕಡೆಗೆ ಸ್ವಾಮಿ ೨

ಗೇಣೇಳು ನಿಚ್ಚಣಿಕೆ ಬಾಣದ ನೆಲೆಸೂತ್ರ
ಕ್ಷೋಣಿಯಲಿ ಒಡ್ಯಾಡುತ
ಪ್ರಾಣನಾಯಕ ಗುರು ಗೋಪಾಲ ವಿಠ್ಠಲ
ಆನಂದ ನಿಲಯವಾಸಾ ಶ್ರೀಶ ೩

೨೦. ರಾಗ ತೋಡಿ ಆದಿತಾಳ

ಕೃಷ್ಣನ ನೋಡಿದೆ ಸರ್ವೋತ್ಕೃಷ್ಟನ ಪಾಡಿದೆ ಪ

ಕೃಷ್ಣನ ನೋಡಿ ಸಾಷ್ಟಾಂಗವ ಮಾಡಿದೆ
ಕಷ್ಟವ ಪರಿಹರಿಸಿಷ್ಟವ ನೀವನ ಅ.

ಶಿಷ್ಟನ ನೋಡಿದೆ ವರ ನಿರ್ದುಷ್ಟನ ನೋಡಿದೆ
ಹೃಷ್ಟಪುಷ್ಟ ಸಂತುಷ್ಟನ ಶ್ರೇಷ್ಟನ
ಶಿಷ್ಟರ ಹೃದಯ ಸಂವಿಷ್ಟನ ಇಷ್ಟನ ೧

ರಂಗನ ನೋಡಿದೆ ದೇವೋತ್ತುಂಗನ ನೋಡಿದೆ
ಅಂಗಸಿಂಗ ಕಾಳಿಂಗ ಮರ್ದನ
ಮಂಗಳಾಂಗ ಭವಭಂಗನ ನೋಡಿದೆ ೨

ದೇವನ ನೋಡಿದೆ ಮುಕ್ತಿ ಈವನ ನೋಡಿದೆ
ಗೋವಕಾವ ಭೂದೇವ ವಂದಿತಬಲ
ದೇವಾನುಜ ಹಯಗ್ರೀವನ ನೋಡಿದೆ ೩

ಬಾಲನ ನೋಡಿದೆ ಲಕುಮಿಲೋಲನ ನೋಡಿದೆ
ಶೀಲ ಶೂಲಧರಪಾಲ ಲೀಲ ಶಿಶು
ಪಾಲಕಾಲ ವನಮಾಲನ ನೋಡಿದೆ ೪

ಧೀರನ ನೋಡಿದೆ ಗುಣಗಂಭೀರನ ನೋಡಿದೆ
ವೀರಶೂರ ಪರಾತ್ಪರ ವರ ಅ
ಕ್ರೂರವರದ ಸಿಂಧು-ರನ ನೋಡಿದೆ ೨೪

ಶ್ಯಾಮನ ನೋಡಿದೆ ಬಲು ನಿಸ್ಸೀಮನ ನೋಡಿದೆ
ಪಾವನ ಭಾವನ ಕಾಮನೈಯನ
ಸಾಮನ ಸೀಮನ ನೋಮನ ನೋಡಿದೆ ೬

ಜಾಣನ ನೋಡಿದೆ ಬಲು ಪ್ರ-ವೀಣನ ನೋಡಿದೆ
ಪ್ರಾಣನ ಪ್ರಾಣನ ಗುಣಗಣಮಂಡಿತ
ವೇಣು ಗೋಪಾಲ ವಿಠಲ ಕಲ್ಯಾಣನ ೭

೨೧. ರಾಗ ನಾದನಾಮಕ್ರಿಯ ಅಟ್ಟತಾಳ

ಜಯ ಜಯ ಭೀಮಸೇನ ಮದ್ಗುರುರಾಯ ಪ.

ಜಯಭೀಮಸೇನ ದುರ್ಜಯ ಪರಾಕ್ರಮ ವೀರ
ದಯಾಪಯೋನಿಧಿಯೆ ನಿರ್ಭಯ ವೈಷ್ಣವಾಗ್ರಣಿ ಅ.

ಕುಂತಿ ಕುವರ ಕುಮುದಸಖಕುಲ ತಿಲಕನೆ
ಅಂತಕಾತ್ಮಜನನುಜ ಅರ್ಜುನಾಗ್ರಜ ರಥ
ಪಙ್ಕ್ತಿ ಜೀಮೂತ ಪ್ರಚಂಡವಾರುತ ಪ್ರಾಕ್ತ
ಶಾಂತಪಾಂತ ದ್ರುಪದನ ತನುಜೆಯ ನಿಜ
ಕಾಂತ ವಿ-ಗಂತವಿಶ್ರಾಂತ ಮಹಿಮ ಮಣಿ

ಮಂತ್ರಾಪ್ರಾಸುರವಿದಾರಿ, ಸಹಜಬಲ
ವಂತ ದುರ್ಜನ ಕುಠಾರಿ, ಕೌರವ ಸೇನಾ
ಕಾಂತಾರ ಪಾವಕ ವೀನೋದ್ಧಾರಿ ೧

ವೃಕೋದರ ವಿಷ್ಣುಸೇವಕ ವಿಜ್ಞಾನಾಂಬುಧಿ
ಬಕಮದ ಧ್ವಂಸಿ ಜಟಾಸುರಾಂತಕ ಹಿಡಿಂ
ಬಕಾಸುರ ಗರ್ವಪರ್ವತ ಪವಿಧರ ಹಿಡಿಂ
ಬಕಿ ಚಿತ್ತಕುಮುದ ಕೋರಕ ಪೂರ್ಣಉಡುರಾಜ
ಅಕಳಂಕ ತನುರಾಗ ಆಚಾರ್ಯ ನಿಪುಣಕೀ
ಚಕಬಲ ನಿರ್ಮೂಲನ, ದ್ರೋಣಾದಿ ಸೈ
ನಿಕ ಅಸುಸಂಹರಣ, ಧಾರ್ತರಾಷ್ಟ್ರ
ನಿಕರ ವಾರಣ ವಿದಾರಣ ಪಂಚವದನ ೨

ಮಣಿಮಯರಥವೇರಿ ಫಣಿಕೇತನನುಜನು
ನೆಣವಿ ದುರ್ಗುಣ ಮಾರ್ಗಣಂಗಳಿಂ ರಣಾಂ
ಗಣದಿ ಕೆಣಿಸಲಾಕ್ಷಣ ನೋಡಿ ಅವನ ನೀ
ತೃಣಮಾಡಿ ಗದೆಯಿಂದ ಹಣಿದು ಹಣೆಯ ಪಟ್ಟ
ಕುಣಿಯಾಲಾಭರಣವು ಝಣಕುಕಿಂಝಣಕೆನ್ನೆ
ಪಣದಿ ನುಡಿದ ವಾಕು ಋಣವ ತೀರಿಸಿ ಅತ್ಯು
ಲ್ಬಣದಿಂದವಗೆಲಂಘಿಸಿ, ವಕ್ಷದಿ ರಕ್ತ
ಕೊಣನ (ಕೊಳನ) ಶಸ್ತ್ರದಿ ನಿರ್ಮಿಸಿ, ಕದಡಿ ಕೂಗೆ
ರಣದಲೊಪ್ಪಿದೆ ನಿನಗೆಣೆಯಿಲ್ಲವೆನಿಸಿ ೩

ಮುದ್ದಾನೆರರೂಪ ಧರಿಸಿ ಮಾಯದಲಿ ಬಂದ
ರುದ್ರನ್ನ ಯುದ್ಧದಿ ಗೆದ್ದು ಓಡಿಸಲಾಗ
ಕೃದ್ಧನಾಗಿ ವ್ಯಾಘ್ರಸಿಂಹರೂಪದಿ ಬರೆ
ಗುದ್ದಿ ಕೆಡಹಿ ವೇಗ ಕೇದಾರ ಕಟ್ಟಿದೆ
ಮುದ್ರಾಧಿಪತಿಯು ಅಂಬರಕಿಟ್ಟು ರಾಜಸೂ
ಯಾಧ್ವರದಲಿ ಮಾಗಧನ ಸಂಹರಿಸಿದತಿ
ಶುದ್ಧ ಸ್ವಭಾವಶೂರ, ಸಕಲ ಸಾಧ್ಯ
ಸಿದ್ಧೇಶಾನಿಲಕುವರ, ನಮಿಪೆ ಎನ್ನ
ಉದ್ಧರಿಸೈಯ ಶ್ರದ್ಧ ಮನೋಹರ ೪

ಭೀಮ ಭವಾರಣ್ಯ ಧೂಮಕೇತನೆ ನಮೋ
ಶ್ರೀ ಮನೋಹರ ಗುರು ಗೋಪಾಲ ವಿಠ್ಠಲನ್ನ
ಪ್ರೇಮಪಾತ್ರ ಪುಣ್ಯಗಾತ್ರ ಸಜ್ಜನಮಿತ್ರ
ಶ್ರೀಮಂತ ಧೀಮಂತ ರಹಿತಾದಿ ಮಧ್ಯಾಂತ
ಧಾಮ ಧೂಮ ಭೀಮ ಕಾಮನಿವಾರಣ
ಭೀಮ ವಿಕ್ರಮ ಸದಾ ಶ್ರೀಮಧ್ವ ಹನುಮಂತ

ಭೀಮಾದಿ ಅಮಿತರೂಪ, ಸದ್ಗುಣಗಣ
ಧಾಮವೀರಪ್ರತಾಪ, ನಮಿಪೆ ಎನ್ನ
ಕಾಮಿತಾರ್ಥವಿಸಿತ್ತು ಕಾಯಯ್ಯ ಭೂಪ ೫

೨೨. ರಾಗ ಶಂಕರಾಭರಣ ಅಟತಾಳ

ಜಯ ಭೀಮ, ಜಯ ಜಯ-ಜಯ ಭೀಮ ಪ.

ಜಯ ಭೀಮಸೇನ ಪರಾಕು, ನೀನೆ
ದಯದಿಂದೆಮ್ಮನು ಕಾಯಬೇಕು, ಆಹ
ನಯದಿಂದಲೆಮ್ಮ ಉಭಯ ಶತ್ರುನಿಕರವ
ಲಯವಗೈಸಿ ನಿರ್ಭಯ ಮಾರ್ಗ ತೋರಿಸೊ ಅ.

ಒಡಹುಟ್ಟಿದವರು ರಾತ್ರೆಯಲಿ, ಮಹಾ
ಅಡವಿಯೊಳಂದು ನಿದ್ರೆಯಲಿ, ಇರೆ
ಹಿಡಂಬಕಾಸುರನು ರೋಷದಲಿ, ಬರೆ
ಕಡುವೇಗದಿಂದ ನೋಡುತಲಿ, ಆಹಾ
ಬಿಡದೆ ಅವನ ಸಂಗಡ ಕಾದಿ ಮಡುಹಿದೆ
ತಡೆಯದೆ ಜನನಿ ಸಂಗಡಿಗರ ಪೊರೆದ್ಯಯ್ಯ ೧

ನಿರುತ ಏಕಚಕ್ರಪುರದಿ, ಮಹಾ
ದುರುಳ ಬಕನು ದಿನದಿನದಿ, ಒಬ್ಬ
ನರನ ಗ್ರಾಸವಕೊಂಡು ಮುದದಿ ಇರು

ತಿರಲು ನೀ ಕೇಳುತ್ತ ಮುದದಿ, ಆಹಾ
ಕರುಣಿಸಿ ವಿಪ್ರನ ತರಳಗೊಲಿದು ಬಕಾ
ಸುರನ ಸಂಹರಿಸಿ ನೀ ಮೆರೆದ್ಯೊ ವೃಕೋದರ ೨

ಖ್ಯಾತ ಮತ್ಸ್ಯನ ಮನೆಯಲ್ಲಿ, ಅ
ಜ್ಞಾತ ವಾಸದಲಿರುತಿರಲಿ, ಮನ
ಸೋತು ಕೀಚಕ ದುರ್ಬುದ್ಧಿಯಲಿ, ಜಗ
ನ್ಮಾತೆ ದ್ರೌಪದಿಯ ಕಾಮಿಸಲಿ, ಆಹಾ
ನೀ ತವಕದಲಿ ರೋಷಾತುರದಲಿ ಬಂದು
ಪಾತಕಿಯನು ಪಿಡಿದ್ಯಾತನೆ ಪಡಿಸಿದ್ಯೊ ೩

ಕಡೆಗಣ್ಣಿನಿಂದಲಿ ನೋಡಿ, ಮುಷ್ಟಿ
ಪಿಡಿದು ಹೊಡೆದು ಈಡ್ಯಾಡಿ, ಅವ
ನೊಡಲೊಳು ತಲೆಕಾಲು ನೀಡಿ, ಎತ್ತಿ
ಹೊಡೆದು ಮಾಂಸದ ಮುದ್ದೆಮಾಡಿ, ಆಹಾ
ಮಡದಿಗೆ ತೋರಿಸಿ ಬಿಡದವನನುಜರ
ಮಡುಹಿ ಬೇಗದಿ ನಿನ್ನ ಮಡದಿಯ ಕಾಯ್ದಯ್ಯ ೪

ವಿಭವ ಮದದಿ ದುಶ್ಯಾಸನನು, ಮಹಾ
ಇಭದಂತೆ ಮದವೇರಿ ತಾನು, ಅತಿ
ಪ್ರಭೆಯುಳ್ಳ ಕನಕ ರಥವನು, ಏರಿ
ಅಭಿಮುಖದಲಿ ಬರೆ ನೀನು, ಆಹಾ
ಸ್ವಭುಜ ವಿಕ್ರಮದಿಂದ ಉಭಯ ದಳದವರಿ
ಗಭಿಮುಖನೆನಿಸಿ ಸುಲಭದಿಂದ ಕಾದಿದ್ಯೊ ೫

ಮುಡುಹಿದ್ಯವನಸಾರಥಿಯನು, ಬೇಗ
ಕೆಡಹಿದ್ಯೊ ಅಶ್ವಧ್ವಜವನು, ಆಗ
ಕಡಿದೆಯೊ ಕರದ ಚಾಪವನು, ಅವ
ಪೊಡವಿಗಿಳಿದು ಬರೆ ನೀನು, ಆಹಾ
ಬಡಿದು ಗದೆಯಿಂದ ಹೊಡೆದು ಅವನ ಕಾಯ
ಪಿಡಿದು ತಿರುಗಿಸುತ ಬಡಿದ್ಯೊ ನೀ ಧರೆಯಲ್ಲಿ ೬

ಭರದಿ ಕಪೋಲವ ಹಣಿದು ನಿನ್ನ
ಕರದಿ ಕಠಾರಿಯ ಪಿಡಿದು, ಮೋರೆ
ತೆರೆದು ನೋಡೆಲೊ ಎಂದು ಕರೆದು, ಎಲೊ
ಮರೆತ್ಯಾ ಸಭೆಯೊಳ್ ನುಡಿದುದು, ಆಹಾ
ಕರಯೊ ನಿನ್ನಣ್ಣನ ಅನುಜನ ಬಿಡಿಸೆಂದು
ಪರಿಪರಿ ಭಂಗಿಸಿ ಚರಣದಿ ತುಳಿದ್ಯೆಯ ೭

ಶಿಡಿಲನುಪಮ ರೋಷದಲ್ಲಿ, ಮುಷ್ಟಿ
ಹೊಡೆದು ಅವನ ವಕ್ಷದಲ್ಲಿ, ರಕ್ತ
ಮಡುವು ಮಾಡಿದ್ಯೊ ಖಡ್ಗದಲ್ಲಿ, ನೀ
ಪಿಡಿದ್ಯೊ ಶೋಣಿತ ಬೊಗಸೆಯಲಿ, ಆಹಾ
ಒಡನೆ ಮೋರೆಗೆ ಚಲ್ಲಿ ಕುಡಿದಂತೆ ತೋರಿಸಿ
ಕಡೆಗಾಲದ ಮೃಡನೊಡೆಯ ನಂತೊಪ್ಪಿದ್ಯೊ ೮

ಎರಡು ದಳದವರ ಕರೆಯೆ ಕಣ್ಣು
ತೆರೆದು ನೋಡಲು ಅಂಜಿಸರಿಯೆ, ಆಗ
ದುರುಳನ ಶಿರವನು ತರಿಯೆ, ಕಂಡು
ಸುರರು ದುಂದುಭಿ ಭೋರ್ಗರಿಯೆ, ಆಹಾ
ನರಹರಿ ಚರಣವ ಸ್ಮರಿಸಿ ಅರ್ಪಿಸಿ ಅತಿ
ಹರುಷ ದ್ರೌಪದಿಗಿತ್ಯೊ ಗುರು ಮಾತರಿಶ್ವನೆ ೯

ಧೀರನಾದ ಗುರುಸುತನು, ಬಲು
ಕ್ರೂರತನದಿ ನಿಂತು ತಾನು, ಮಹಾ
ಘೋರ ನಾರಾಯಣಾಸ್ತ್ರವನು, ಬಿಡೆ
ದೂರ ಮಾಡೆ ಮಾಧವನು, ಆಹ
ಮಾರುತಿ ನೀ ಮಾತ್ರ ಧೀರನಾಗಿ ನಿಂತು
ಮಾರು ಅಟ್ಟಿದೆ ಬಲು ಶೂರಾಗ್ರೇಸರ　೧೦

ದುರಿಯೋಧನನ ಊರುಗಳ, ಬೇಗ
ತರಿದೆಯೊ ಗದೆಯಿಂದ ಪ್ರಬಲ, ಆಗ
ಧರೆಯ ಭಾರವ ನಿಳುಹಿದೆಲ, ಎಂದ
ಗುರು ಗೋಪಾಲ ವಿಠ್ಠಲ್ಲ, ಆಹಾ
ಕರುಣದಿ ಧರ್ಮಾದ್ಯರಕೂಡಿ ಹಸ್ತಿನಾ
ಪುರದಿ ವೈಭವದಿಂದ ಮೆರೆದ್ಯೋ ವೃಕೋದರ　೧೧

೨೩. ರಾಗ ಮಧ್ಯಮಾವತಿ ಅಟತಾಳ

ಜೋತು ಬಂದೆನೊ ನಿನ್ನ ಬಳಿಗೆ, ಒಂದು　ಪ.
ಮಾತಾಡದಂಥ ಮದವು ಬಂತೆ ನಿನಗೆ　ಅ.

ಕಲಕಾಲವು ನೀನು ನಾನು, ಒಂದು
ಸ್ಥಳದಲ್ಲಿ ಇದ್ದದು ಮರೆತೆಯ ಏನು
ಬಲು ಭಾಗ್ಯ ಬಂತೆಂಬೊದೇನು, ಎನ್ನ
ನಿಲಯದಿ ಪೇಳಲು ನಿಲ್ಲುವೆ ನೀನು　೧

ಗುರುತು ಎನ್ನದು ಮರೆತೆಯೇನು, ನಿನ್ನ
ಪರಿಯೆಲ್ಲ ಬಲ್ಲೆ ಈಗಿನ ಗರ್ವವೇನು
ಸಿರಿಬಂದು ಮುಸುಕಿತೆ ನಿನ್ನೇನು, ಕೂಗಿ
ಕರೆದರೆ ಕೇಳದ ಕಾರಣವೇನು　೨

ದೂರದಿ ಮನೆಗೆ ಬಂದವರ, ಕರೆದು
ನೀರನಾದರು ಕೊಟ್ಟು ಕಳುಹಬೇಕವರ
ದಾರಿಗೆ ದಾರಿ ನೋಡುವರ, ನಿನ್ನ
ಪೋರತನವು ಒಳಿತಲ್ಲವೊ ಧೀರ ೩

ನೆಂಟರ ಭಂಟನೀನಲ್ಲೆ, ಎನ್ನ
ನೆಂಟತನವು ಲೇಶ ಬೇಕಿಲ್ಲವಲ್ಲೆ
ನೆಂಟಳು ನಮಗೆ ಶ್ರೀ ಬಲ್ಲೆ, ನಿನ್ನ
ತುಂಟತನವ ಬಿಡಬೇಕಾಯಿತಲ್ಲೆ ೪

ನಿಜಾನಂದದಿ ನೀನಿಪ್ಪವನೆ, ಮತ್ತೆ
ಅನ್ಯರಿಂದಾನಂದ ಬೇಕಿಲ್ಲದವನೆ
ಎನ್ನ ದಾರಿಗೆ ಸುರಧೇನೆ, ಇನ್ನು
ಮನ್ನಿಸು ವರದ ಗೋಪಾಲ ವಿಠ್ಠಲನೆ ೫

೨೪ ರಾಗ ತೋಡಿ ಆದಿತಾಳ

ದುರ್ಗೆ ಪಾಲಿಸೆ ಮಾತೆ ನಂಬಿದೆ ಬ್ರಹ್ಮ
ಭರ್ಗಾದಿ ಸುರವಿನುತೆ ಪ.

ದುರ್ಗಮಭವದಿಂದ ನಿರ್ಗಮಗೈಸು ಹೇ
ಭಾರ್ಗವಿ ಸ್ವರ್ಗಾಪವರ್ಗಪ್ರದಾತೆ ಅ.

ಅಂಬರ ಭೂಮಿ ವಿಹಾರಿ, ಅಷ್ಟಾಯುಧಾದಿ
ವ್ಯಾಂಬರ ಧಾರಿ ಅಸುರಾರಿ
ನಂಬಿದೆ ನಿನ್ನ ಪಾದಾಂಬುಜ ಎನ್ನ ಹೃ
ದಂಬರದಲ್ಲಿಹ ಬಿಂಬನ ತೋರಿಸು
ಎಂಬೆ, ಕುಸಿತಂಬೆ ಜಗದಂಬೆ
ಶುಭಗುಣ ನಿಕುರುಂಬೆ ೧

ನಂದ ಗೋಪನ ಕುಮಾರಿ, ನರಸಿಂಹಾಂಕ
ಮಂದಿರೆ ಸಜ್ಜನೋದ್ಧಾರಿ
ಇಂದಿರೆ ಎನ್ನಯ ಇಂದ್ರಿಯ ಮನಸು ಮು
ಕುಂದನ ಪದದಲ್ಲಿ ತಂದು ನಿಲ್ಲಿಸು
ಎಂದೆ, ಎನ್ನ ಇಂದೆ ಇನ್ನು ಮುಂದೆ
ಗತಿ ನೀನೆ ಎಂದೆ ೨

ಸಿರಿ ನರಸಿಂಹನ ರಾಣಿ, ವರನೀಲವೇಣಿ
ಪರಮ ಕಲ್ಯಾಣಿ ಗುಣಶ್ರೇಣಿ
ಪರತರ ಗುರು ಗೋಪಾಲ ವಿಠ್ಠಲನ
ಚರಣ ಕಮಲದಲಿ ಸ್ಥಿರವಾದ ಭಕುತಿಯ
ನೀಡೆ, ನಿನಗೀಡೆ ನಲಿದಾಡೆ
ದಯಮಾಡಿ ನೋಡೆ ೩

೨೫. ರಾಗ ಆನಂದಭೈರವಿ ಝಂಪೆತಾಳ

ದೀನ ಜನಮಂದಾರನೆ-ಸಲಹೊ ಸು
ಜ್ಞಾನಾದಿ ಗುಣ ಶೀಲನೆ ಪ.

ವಾಗಾದಿ ದಶ ಇಂದ್ರಿಯಗಳು-ದುಷ್ಟ
ಭೋಗಗಳಿಗೊಶವಾದವೊ
ಸಾಗಿ ಬಾರವೊ ಹಿಂದಕೆ-ಸರ್ವೇಶ
ಯೋಗಿಗಳ ಒಡೆದು ಕಾಯೊ ೧

ಐದೊಂದು ಅರಿವರ್ಗದಾ-ಧೀನವನು
ಐದಿ ಬಲು ಪರಿ ಕ್ಲೇಶದಿ

ಸುಯ್ದು ಬೈಗು ಬೆಳಗಲಿ-ಬಂಧದಲಿ
* ಹೈದ ಹೋಗಾಡಿಸಿದೆನೋ ೨

ಪರರ ಬಾಗಿಲನು ಕಾಯ್ದು-ಅನುದಿನದಿ
ಪರರ ಗುಣಗಳನು ತುತಿಸಿ
ಪರರನ್ನಗಳನೆ ಬಯಸಿ-ಪರಿಪರಿ
ನರಕಕ್ಕೆ ಗುರಿಯಾದೆನೋ ೩

ಪ್ರಾಣಿಯನು ಪರರಿಗೊಡ್ಡಿ-ಧನತಂದು
ಕಾಣಿಸುವೆ ಕಲುಷಗಳಿಗೆ
ಗೇಣುದರ ದಾಸೆಗಾಗಿ-ಶಿರಗೊಡ್ಡಿ
ಹೀನರಿಗೆ ಅಲ್ಪರಿದೆನೋ ೪

ಮನಕೆ ಪೇಳುವರಿಲ್ಲವೊ-ಮನ್ಮಥನ
ಜನಕ ಜಯವಂತ ವಿಭುವೆ
ಸನಕಾದಿ ವಂದ್ಯ ನೀನು-ಸಲಹದಿರೆ
ಎನಿತು ಬಾಳುವೆನೊ ನಾನು ೫

ಸಾಕುವುದು ನಿನಗೆ ಅಂದೆ-ಭಕುತರನು
ನೂಕುವುದು ನಿನಗೆ ಬಿರುದೆ
ನಾ ಕೂಗಿ ವದನ ತೆರೆದು-ನರಹರಿಯೆ
ಏಕೆನ್ನ ನೀನು ಮರೆದೆ ೬

ಉಕ್ಕು ಉಕ್ಕುವ ನೀರನು-ಬಾಲಕರಿ
ಗಕ್ಕರದಿ ಎರೆದ ತೆರನು
ನಕ್ಕು ನಿನ್ನ ಲೀಲೆಯ-ಮಾಡೆ ಜೀ
ವರ್ಗಳಿಗೆ ಬಹಳ ಭಯವೊ ೭

* ಹೈದ = ಪ್ರಾಯ.

ಜಗದೊಳಗೆ ನಿನ್ನಾಟವ-ಆಡುತಲಿ
ಬಗೆಬಗೆಯ ಪರಿಪಾಟವ
ಹಗಲಿರುಳು ಕೊಡುವೆ ನೀನೇ-ನಾ ಮತ್ತೆ
ಮಿಗಿಲಾಗಿ ಬಯಸುವವನೆ ೮

ಮಾನವಾಗ್ರಣಿ ದೇಹನೋ-ನಿನ್ನಪದ
ಧ್ಯಾನಕ್ಕೆ ದೂರಾದೆನೋ
ಕೋಣನಂದದಿ ದುಡಿವೆನೋ-ಶ್ರೀ ನಾಥ
ಏನು ಕರುಣವು ಬಾರದೋ ೯

ದುರುಳ ಆವಿನ ಪಾಲನು-ಕರೆವುದಕೆ
ಪರಿಪರಿಯ ಬಾಧೆಗಳನು
ಬರಿಮೋಹದಿಂದ ಪಟ್ಟು-ಬಲು ಛಲದಿ
ಉರಗಗಳಿಗೆರೆದ ತೆರನೊ ೧೦

ಮಾನದ್ರವ್ಯದ ಆಸೆಗೆ-ಮಾತುಗಳ
ನಾನೆ ಹೇಳುವೆನವರಿಗೆ
ಹಾನಿಯನು ತಿಳಿಯಲಿಲ್ಲ-ಸುಪಂಥ
ದಾನಿಗಳ ತೋರೊ ನಲ್ಲ ೧೧

ಆವಾವ ಬಗೆಯಿಂದಲಿ-ನೋಡಿದರು
ನಾವೊಂದು ಸುಖಕಾಣೆನೊ
ಹಾವಿನಾ ಹೆಡೆಯ ನೆಳಲ-ಸೇರಿದಾ
ಆಖುವಿನ ತೆರನಾದೆನೋ ೧೨

ಜಾತಿಕಾರನ್ನ ತೆರನು-ಗುಣವಿಲ್ಲದೆ
ಖ್ಯಾತಿಯನು ತೋರುತಿಹೆನು
ಪ್ರೀತಿ ಮನ್ನಣೆಯೊಳಿಟ್ಟು-ಜನರನ್ನು
ಮಾತಿನಲಿ ಮೋಹಿಸುವೆನು ೧೩

ವೇದಶಾಸ್ತ್ರಗಳಿಂದಲಿ-ನಿನ್ನ ಪ್ರತಿ
ಪಾದ್ಯ ಮಹಿಮೆಯನು ತೊರೆದು
ಓದಿ ಮರುಳಾದೆನಲ್ಲೋ-ಎಲೊ ಹರಿಯೆ
ಬೋಧವಿತ್ತೆನ್ನ ಸಲಹೊ ೧೪

ಏನಾದರೇನು ಹರಿಯೆ-ನಿನ್ನ ಅ
ಧೀನದಾ ಬಗೆಯನರಿಯೆ
ವೇಣು ಗೋಪಾಲ ವಿಠಲ-ನಿನ್ನಯಾ
ಮಾನಿನಿಯಾಟ ಪ್ರಬಲಾ ೧೫

೨೬. ರಾಗ ಕಲ್ಯಾಣಿ ಅಟತಾಳ

ದುರಿತ ವಾರಿವಾಹ ಜಂಝಾನಿಲ
ಶರಣು ಶರಣು ಅಸ್ಮದ್ಗುರುವೆ ವಿಜಯರಾಯ ಪ.

ಆಗಾಮಿ ಸಂಚಿತಾಖಿಳ ಕರ್ಮ ವಿದೂರ
ರಾಗ ದ್ವೇಷಾದಿ ದುರ್ಗುಣವರ್ಜಿತ
ಭೋಗ ಪ್ರಾರಬ್ಧವ ಭುಂಜಿಸ ಭೂದೇವ
ಭಾಗವತರು ನಿನ್ನ ಬಿಡದೆ ಕೊಂಡಾಡುವರು ೧

ಈಷಣತ್ರಯ ದೂರ ಇಳೆಯೊಳಗಿದ್ದ ಪುಣ್ಯ
ದೇಶ ಸಂಚಾರ ಪಾವನ ಶರೀರ
ದಾಸರ ನಿಜಪ್ರಿಯ ಶಮದಮ ಸಾಧನ
ಕೋಶ ಭರಿತ ನಿತ್ಯ ಕೊಂಡಾಡುವ ಜನಕೆ ೨

ಕಾಮಾದಿ ರಿಪುಗಳನು ಜಯಿಸಿ ನೀ ಹೃದಯ
ವ್ಯೋಮದೊಳಗೆ ನಿತ್ಯ ಹರಿಯ ಪಾದ
ತಾಮರಸವ ಭಜಿಸಿ ಮೆರೆವ ಮಹಾಮಹಿಮ
ನೇಮದಿಂದಲಿ ನಿತ್ಯದಲಿ ಸ್ಮರಿಸುವರ ೩

ಅಧ್ಯಾತ್ಮಾಖಿಳ ಗೋಪ್ಯತತ್ವವಿಚಾರ
ಸ್ವಾಧ್ಯಾಯ ನಿಪುಣ ಸಕಲ ಜನ್ಮದಿ
ಅದ್ವೈತ ಕೋಲಾಹಲ ರಿಪುಶೂಲ
ಸಿದ್ಧಾಂತ ಜ್ಞಾನಸಿಧಿಯೆ ನಿಜಾರ್ಘಕರ ೪

ಭುವನ ಮಂಡಲದಿಹ ಕವಿಗಳಶಿರೋರನ್ನ
ಭವದೂರ ಜ್ಞಾನಿಭಕ್ತರ ನಿಧಿಯೆ
ಪವನಾಂತರ್ಗತ ಗುರು ಗೋಪಾಲ ವಿಠಲನ್ನ
ಸುವನಜ ಚರಣ ಸೇವೆಯ ನಿತ್ತು ಗುರುವರ ೫

೨೭. ರಾಗ ಮಧ್ಯಮಾವತಿ ತ್ರಿಪುಟತಾಳ

ಪಾಲಿಸುವುದು ಎನ್ನ ಪಾವನ್ನ, ವೇಣು ಗೋ
ಪಾಲ ಗುಣಗಣಪೂರ್ಣ, ನಿನ್ನಂಘ್ರಿ ಭಜನೆಯ
ಲೋಲರಲ್ಲಿಡು ಮುನ್ನ-ಆನಂದ ಘನ್ನ ಪ.

ಶ್ರೀಲತಾಂಗಿಯ ರಮಣ ಶೋಭಿತ
ಮಾಲ ಮುಕ್ತಾಭರಣ ಭಕುತರ
ಕಾಲ ಕಾಲಕೆ ಒದಗುವೋ ಪರಿ
ಶೂಲಧರ ವಿಧಿ ವಿಬುಧ ವಂದ್ಯ ಅ.

ವಿಸು ಜನುಮಗಳಿಂದ, ಭವದೊಳಗೆ ಬಂದು
ವಾಸವಾದುದರಿಂದ, ಪರಿಪರಿಯ ವಿಧದಲಿ
ಕ್ಲೇಶಪಟ್ಟೆ ಗೋವಿಂದ, ಖತಿಸಾಗರದೊಳು
ಈಸಲಾರೆ ಆನಂದ-ನೀ ಕಡಿಯೊ ಬಂಧ

ವಾಸುದೇವಾನಂತ ಶ್ರೀಧರ
ಕೇಶವಾ ದಾಮೋದರಾಚ್ಯುತ
ಶ್ರೀಶ ಸುಂದರಹಾಸ ಹರಿಸ
ರ್ವೇಶ ಸಜ್ಜನ ಪೋಷನೆ

ವಾಸವಾನುಜ *ವಾಸವಿ ನುತ
ವಾಸಿಪಂಥಗಳಿಲ್ಲದಿಹ ಸುಖ
ದಾಶ ರಾವಣನ ನಾಶಗೈಸಿದ
ದಾಶರಥೆ ಮನದಾಸೆ ಪೂರ್ತಿಸಿ ೧

ಆರಿಗುಸುರಲಿ ನಾನು, ಅಲ್ಪಜ್ಞ ಜನರಿಗೆ
ಸಾರಿ ಪೇಳಿದರೇನು, ಸರ್ವಜ್ಞ ಎನ್ನ
ದೂರ ನೋಳ್ಪರೆ ಮಾಣು, ನೆನೆವರಿಗೆ ಬೆಂಬಲ
ಸಾರಿದ ಸುರಧೇನು-ರಥಾಂಡಜನು

ಏರಿಮೆರೆವ ಯದುಕುಲೋತ್ತಮ
ಮಾರಜನಕ ಮಂದರೋದ್ಧರ
ವಾರಿಜಾಸನ ವಂದಿತಾಂಘ್ರಿ
ಸಾರ ಹೃದಯರ ಸಾಕುತಿಪ್ಪನೆ

ಕ್ರೂರ ಕುಲಕುಠಾರ ಕುಂಭಿಣಿ
ಭಾರ ಪರಿಹರ ಭವ ವಿಮೋಚನ
ನೀರಜಾಕ್ಷ ನಿಗಮವೇದ್ಯ
ಹಾರ ಕೌಸ್ತುಭ ಹೃದಯ ಶೋಭಿತ ೨

ಮನವನಿಲ್ಲಿಸೊ ಜೀಯ, ದುರ್ಲಭದಿ ಬಂದ
ಮಾನವಾಗ್ರಣಿ ದೇಹ, ಸ್ಥಿರವಲ್ಲವೋ ಈ
ತನುವು ತಿರುಮಲರಾಯ, ಇದರೊಳಗೆ ಸಲಹಲು
ಘನತೆ ನಿನಗತಿಶಯ್ಯ-ಬಿಡು ನಿನ್ನ ಮಾಯ

ವನಜ ಜಾಂಡವ ಪಡೆದು ಸರ್ವರ
ದಿನದಿನದಿ ಪೊರೆಯುತ್ತ ಪರಮಾ
ದನುಜ ದಿವಿಜರ ಮನೆಯ ಮಾಡಿ
ಅನುದಿನದೊಳ ಗಾಡುತಿಪ್ಪನೆ

* ವಾಸವಿ = ಅರ್ಜುನ

ಮುನಿಜನರ ಹೃದಯಾಬ್ಜಮಂದಿರ
ಬಿನಗು ದೈವರಗಂಡ ಗಜನೃಪ
ವನಿತೆ ವಸುಧೆಯು ಕಾಯ್ದ ವೇಣುಗೋ
ಪಾಲ ವಿಠಲ ಒದಗಿ ಈಗಲೆ ೩

೫೮. ರಾಗ ನಾದನಾಮಕ್ರಿಯೆ ಆದಿತಾಳ

ಪಾರ್ವತಿ ಪಾಲಿಸೆನ್ನ *ಮಾನಿನಿ ರನ್ನೆ (ಪಾಹಿಸಿ ಪಾ.)
ಪಾರ್ವತಿ ಪಾಲಿಸೆನ್ನ ಪ.

ಪಾರ್ವತಿ ಭಕ್ತರ ಸಾರಥಿ ವಂದಿತೆ
ಸುರಪತಿ ಗಜಮುಖ ಮೂರುತಿ ಮಾತೆ ಅ

ಮನದಭಿ ಮಾನಿಯು ನೆನೆವೆನೆ ನಿನ್ನನು
ಅನುಕರಿಸೆನ್ನನು ಅಂಬುಜಪಾಣಿ ೧

ಮಂಗಳೆ ವೃಡನಂತರಂಗಳೆ ಹರಿಪದ
ಭೃಂಗಳೆ ತುಂಗಳೆ ಪನ್ನಗವೇಣಿ ೨

ಗುಣಪೂರ್ಣ ವೇಣುಗೋಪಾಲ ವಿಠಲನ್ನ
ಕಾಣಿಸಿ ಕೊಡುವಂಥ ಶೂಲಿಯರಾಣಿ ೩

೫೯. ರಾಗ ಬಿಲಹರಿ ಆದಿತಾಳ

ಪಾಲಿಸೈಯ ಪವನನೈಯ
ಪಾಲವಾರಿಧಿ ಶಯ್ಯಾ, ವೆಂಕಟರಾಯಾ ಪ.

ಕಾಲಕಾಲಕೆ ಹೃದಯಾಲಯದೊಳು ನಿನ್ನ
ಶೀಲ ಮೂರುತಿ ತೋರೊ ಮೇಲು ಕರುಣದಿ ಅ

ಶ್ರೀಶಸಂಸಾರವೆಂಬೋ ಸೂಸುವ ಶರಧಿಯೊಳು
ಈಸಲಾರನೋ ಹರಿಯೆ ಹೇ ಧೊರೆಯೇ
ದಾಸನೆಂತೆಂದ ಮೇಲೆ ಘಾಸಿಗೊಳಿಸುವುದು
ಲೇಸು ನಿನಗಲ್ಲವೈಯ್ಯ, ಹೇ ಜೀಯ

ದೋಷ ರಾಶಿಗಳೆಲ್ಲ ನಾಶವಮಾಡಿ ವಿ
ಶೇಷವಾದ ಜ್ಞಾನ ಲೇಸು ಭಕುತಿಯಿತ್ತು
ಆಸೆಯು ಬಿಡಿಸೆನ್ನ ವಿಾಸಲ ಮನವಮಾಡಿ
ನೀ ಸುಳಿವುದು ಶ್ರೀನಿವಾಸ ಕೃಪಾಳೋ ೧

ಮೂರು ಗುಣಗಳಿಂದ ೧ ಮೂರು ತಾಪಗಳಿಂದ ೨
ಮೂರು ಅವಸ್ಥೆಯಿಂದ ೩ ಮುಕುಂದ
ಮೂರು ಐದರಿಂದ ೪ ಮೂರು ಏಳರಿಂದ ೫
ಮೂರಾರು ದಾರಿಗಾಣದೆ ೬ ಮೂರಾದೆ ೭

ಮೂರು ಹಿಡಿಸಿ ಮೇಲೆ ೮ ಮೂರೆರಡೋಡಿಸಿ ೯
ಮೂರು ಮೂರು ಭಕ್ತಿ ೧೦ ಮೂರು ಕಾಲಕೆಯಿತ್ತು ೧೧
ಮೂರು ರೂಪನಾಗಿ ೧೨ ಮೂರು ಲೋಕವನೆಲ್ಲ ೧೩
ಮೂರು ಮಾಡಿದ ೧೪ ಬಿಂಬ ಮೂರುತಿವಿಶ್ವ ೨

---

(೧) ಸತ್ವರಜಸ್ತಮಗಳು (೨) ಆಧಿದೈವಿಕ, ಆಧಿಭೌತಿಕ, ಆಧ್ಯಾತ್ಮಿಕ. (೩) ಜಾಗ್ರತ್ಸ್ವಪ್ನ, ಸುಷುಪ್ತಿ. (೪) ಅಷ್ಟಮದಗಳು. (೫) ದಶೇಂದ್ರಿಯಗಳು. (೬) ನವವಿಧ ಭಕ್ತಿಗಳು. (೭) ಸೃಷ್ಟಿ ಸ್ಥಿತಿಲಯಕ್ಕೆ ಗುರಿಯಾದೆ. (೮) ಜ್ಞಾನ ಭಕ್ತಿ ವೈರಾಗ್ಯ. (೯) ಅರಿಷಡ್ವರ್ಗಗಳು. (೧೦) ನವವಿಧ ಭಕ್ತಿ-ಶ್ರವಣ ಕೀರ್ತನೇತ್ಯಾದಿ. (೧೧) ಪ್ರಾತಃ ಮಧ್ಯಾಹ್ನ ಸಾಯಾಹ್ನ. (೧೨) ವಿಶ್ವ ತೈಜಸ ಪ್ರಾಜ್ಞ. (೧೩) ಸ್ವರ್ಗ ಮರ್ತ್ಯ ಪಾತಾಳ. (೧೪) ಸೃಷ್ಟಿ ಸ್ಥಿತಿಲಯಕಾರ್ಯಗಳ

ಕರುಣಸಾಗರ ನಿನ್ನ ಸ್ಮರಣೆ ಮಾತ್ರದಿ ಸಕಲ
ದುರಿತ ಪರಿಹಾರವೆಂದು ನಾ ಬಂದು
ಮರೆಹೊಕ್ಕ ಮೇಲಿನ್ನು ಪೊರೆಯಬೇಕಲ್ಲದೆ
ಜರಿದು ಬಿಸಾಡುವರೆ-ಮುರಾರೆ

ಮರುತಾಂತರ್ಗತ ಗೋಪಾಲ ವಿಠಲ ಈ
ಶರೀರವೆ ನಿನ್ನಯ ಚರಣಕೊಪ್ಪಿಸಿದೆನೊ
ಪರಿಬಂದದ್ದು ಮಾಡು ಬಿರುದು ನಿನ್ನದು ದೇವ
ಪರಮ ದಯಾಸಿಂಧೆ ಉರಗಾದ್ರಿ ವಾಸ ೨

೩೦. ರಾಗ ಮಧ್ಯಮಾವತಿ ತ್ರಿಪುಟತಾಳ

ಪಾಲಿಸೆನ್ನನು ದೇವ, ಭುವನತ್ರಯಂಗಳ
ಲೀಲೆಯಿಂದಲಿ ಕಾವ, ಹರಿಯೆ ಅನಾದಿ
ಮೂಲ ಸುಸ್ವಭಾವ, ಪವನಂಗೆ ಜೀವ ಪ.

ಶ್ರೀ ಲಕುಮಿಪತಿ ಅಜಜನಕನಾದಿ
ಕಾಲನಿತ್ಯಾನಿತ್ಯ ಮುಕುತರ
ಕಾಲಕಾಲಕೆ ಪೊರೆವದಾತ ವಿ
ಶಾಲ ಮಹಿಮನೆ ಮೇಲು ಕರುಣದಿ ಅ.

ವಿಜಯಸಾರಥಿ ವೀರ, ವಿಶ್ವೇಶ ವಿಭುವರ
ಸುಜನ ಮನ ಸಂಚಾರ, ಶುಭಗುಣ ಗಣಾಂಬುಧಿ
ರಜತಮೋಗುಣದೂರ, ಪರತತ್ವಸಾರ

ಕುಜನಮರ್ದನ ಕುಮುದ ಸಖ ಮುಖ
ಕುಬ್ಜ ಮೂರುತಿ ಕುಮತಿ ಭಂಜನ
*ಕುಜಪ್ರದಾಯಕ ಕುಟಿಲ ವರ್ಜಿತ
ಸುಜನ ಮನ ಅಂಬುಜ ದಿವಾಕರ

* ಕುಜ ಪ್ರದಾಯಕ = ಪಾರಿಜಾತ ವೃಕ್ಷವನ್ನು ತಂದು ಕೊಟ್ಟವನು

ಭುಜಗ ಶಯನನೆ ಭೂರಮಣ ಹರೆ
ದ್ವಿಜಧ್ವಜನೆ ಅಂಬುಜದಳೇಕ್ಷಣ
ಭಜಕಜನ ಚ-ಕೋರ ಚಂದ್ರಮ
ವ್ರಜದಜಂಗುಳಿ ಕಾಯ್ದ ಕೃಷ್ಣ

ಅಜರಾಮರಣ ಅಪ್ರಮೇಯ
ನಿಜಪೂರ್ಣ ಸುಖ ನಿತ್ಯನಿರ್ಮಲ
ಗಜವರದ ಗಂಭೀರ ನಿಜಪದ
ಅಜನಿರಂಜನ ಅಘ ನಿವಾರಣ

ನಿಜ ಜನರ ಪೊರೆವಂತೆ ದೇವನೆ
ತ್ರಿಜಗದಲಿ ಅನ್ಯರನು ಕಾಣೆನೊ
ದ್ವಿಜರ ರಕ್ಷಿಸಿ ನಿಜರ ತಾಮಸ
ತ್ಯಜಿಸುವಂದದಿ ಮಾಡು ಸರ್ವದ ೧

ಪಟುತರಾಂಗನೆ ದೇವ, ಜೀವೇಶ ಭಕುತರ
ಕಟಕ ಸರ್ವದ ಕಾವ, ಧ್ಯಾನಿಪರ ಮನದಲಿ
ತಟಿತದಂದದಿ ಪೊಳೆವ, ಮಹಾನುಭಾವ

ಹಾಟಕ ಕಶಿಪು ಸುತನ ಪಿಡಿದು ಧೂ
ರ್ಜಟಿಯು ಪರನೆಂತೆಂದು ಒಂದು
ತೃಟಿಯು ಬಿಡದಲೆ ಬಾಧಿಸಲು ಬಲು
ಹಟದಿ ನಿನ್ನನು ತುತಿಸಿಕೊಳುತಿರೆ

ಚಿಟಚಿಟನೆ ಚೀರುತ್ತ ಬ್ರಾಂಡದ
ಕಟಹ ಪಟಪಟ ಬಿಚ್ಚುವಂದದಿ
ಕಟಕಟನೆ ಪಲ್ಲಡಿದು ಕಂಭದಿ
ಭಟಭಟಾಭಟರೆನ್ನೆ ಪೊಳೆಯುತ

ಕಠಿಣ ಖಳನ ಕೆಡಹಿ ಅವನ
ಜಠರವನು ನಖದಿಂದ ಭೇದಿಸಿ

ಘಟದ ತರಳನ ಕಾಯ್ದೆ ಎನ್ನಯ
ಕುಟಿಲ ಕಟುಮತಿ ಅಟತವಾನಲ
ವಟದೆಲೆಯ ಸಂಪುಟದ ತೊರಗಿ ಉಂ
ಗುಟವ ಮೆಲುವ ಮೂಲಕಾರಣ
ಚಟುಲ ವಿಕ್ರಮ ಧೀರ ಭವಸಂ
ಕಟ ಹರಣ ವೆಂಕಟರಮಣ ಹರೆ ೨

ಪನ್ನಗಾಚಲ ನಿಲಯ ಶ್ರೀ ಶ್ರೀನಿವಾಸ
ಪನ್ನಗಾಶನ ಪ್ರಿಯ, ದುರಿತಾದ್ರಿ ಕುಲಿಶ ಮೋ
ಹನ್ನ ನಿರ್ಜಿತ ಮಾಯಾ, ಕಾಯುಯ್ಯ ಜೀಯ
ನಿನ್ನ ಹೊರತಿನ್ನನ್ಯದೈವರ
ಮನ್ನಿಸೆನೊ ಮನ ವಚನ ಕಾಯದಿ
ಇನ್ನು ಮುನ್ನಿದು ಸಿದ್ಧವಯ್ಯಾ
ಪನ್ನ ಜನ ಕಾರುಣ್ಯ ಮೂರುತಿ

ಜನ್ಮ ಜನ್ಮಾಂತರದಿ ಮಾಡಿದ
ಎನ್ನಘಾವಳಿಗಳನೆ ಕಳೆದು
ಭಿನ್ನರಹಿತ ಜ್ಞಾನವಿಂಡಲಿ
ಚೆನ್ನ ಭಕ್ತರ ಸಂಗ ಪಾಲಿಸೊ
ನಿನ್ನ ಬೇಡುವೆ ನಿದನೆ ಗುಣನಿಧೆ
ಬನ್ನ ಬಡಿಸುವುದೇಕೆ ಶರಣನ
ಹೊನ್ನು ಹಣ ಹೆಣ್ಣುಗಳ ಕೊಡು ಯೆಂ
ದಿನ್ನು ಯಾಚಿಪನಲ್ಲ ನಿನ್ನನು

ನಿನ್ನ ಬಿಂಬಕ್ರಿಯೆಗಳನ್ನೆ
ಚೆನ್ನವಾಗಿ ತಿಳಿಸೊ ಜೀವರ
ಭಿನ್ನ ಗುರು ಗೋಪಾಲ ವಿಠಲ ಪ್ರ
ಪನ್ನ ಭಾಗ್ಯ ದಯಾಸಿಧೋ ಹರಿ ೩

೩೧ ರಾಗ ಕಲ್ಯಾಣಿ ಝಂಪೆತಾಳ

ಬಯಸದಿರು ದುರ್ವಿಷಯವ ಪ್ರಾಣಿ ಪ.

ಬಯಸದಿರು ದುರ್ವಿಷಯ, ಬಹು ವಿಧದ ದುಃಖಕರ
ಸಹ್ಯವಲ್ಲ ಬಂದರನ್ನ ಇಹಪರದಿ
ಭಯ ಬಹಳ ಬಾಧೆಗನ್ನ ಇದರ ಕೊನೆ
ಜಯಿದುಪೆಯ ಎಂದಿಗನ್ನ ಪ್ರಾಣಿ ಅ.

ಮನದಾಸೆ ಗಾವನೆಲೆ ಘನವಾದ ಗಿರಿಯತಿಲೆ
ಸೆಣೆಸಿದರೆ ಅಧಿಕವೋಲೆ, ಕ್ಷಣಕ್ಷಣಕೆ
ದಣಿಸುವುದು ಮುಳ್ಳು ಶೂಲೆ, ಅಡಿಬಿದ್ದ
ಮನುಜನ ರಥದ ಘಾಲೆ, ಯಮರಾಯ
ಎಣಿಸುವನು ದಿನದ ಮಾಲೆ, ಪ್ರಾಣಿ ೧

ಸತಿಸುತರು ಸರ್ವಬಗೆ ಹಿತದವರು ನಿನ್ನ ಬಳು
ನುತಿಸುವರು ನಿತ್ಯದಲ್ಲಿ, ಹಿಗ್ಗಿ ಪರಿ
ಪ್ರತಿಮಾರ ಸ್ನೇಹವಲ್ಲಿ, ಮಾಡಿ ಸ
ಮ್ಮತನಾಗಿ ನಡೆವೆ ಅಲ್ಲಿ, ನಿನಗೊಂದು
ಹಿತತಪ್ಪಿದಾಗ ಎಲ್ಲಿ, ಪ್ರಾಣಿ ೨

ಅಧಿಕಾಯು ನಿನಗಿಲ್ಲ, ಅರೆಘಳಿಗೆ ಸ್ಥಿರವಿಲ್ಲ
ವಿಧಿಕುಲವು ಬಾರದಲ್ಲ, ಬಂದರೂ
ಬುಧ ಜನರ ಸಂಗವಿಲ್ಲ, ಇದ್ದರೂ
ಅಧಿಕಧಿಕ ಪೇಳರಲ್ಲ, ಈ ಸುಧಾಂ
ಬುಧಿಬಿಟ್ಟು ಕೆಡುವಿಯಲ್ಲ, ಪ್ರಾಣಿ ೩

ಹೋಗುತಿದೆ ಎಲೊ ಹೊತ್ತು, ಕೂಗುತಿದೆ ಎಲೊ ಮೃತ್ಯು
ಸಾಗುತಿದೆ ಸಂಗ ಜತ್ತು, ತನುರಾಗ
ಭೋಗಸಾಗರವ ಬತ್ತು. ಗಳಿಸಿಕೋ
ಯೋಗಿಗಳ ಚರಣ ವೊತ್ತು. ಜ್ಞಾನದಲಿ
ಕೂಗಿ ಕರೆ ಹರಿಗೆ ಎತ್ತು, ಪ್ರಾಣಿ ೪

ತೊಳಲೊ ನಿನ್ನೀ ದೇಹ, ಕಳೆಲೊ ಮಮತೆಯ ಮೋಹ
ಹಳಿಯೊ ದುರಾಸೆ ನೇಹ, ಇಳೆಯೊಳಗೆ
ತಿಳಿಯೊ ಉತ್ಕೃಷ್ಟ ಊಹ, ಎಲ್ಲ ಬಿರಿ
ಮಳೆಯೊ ದುರಿತಾಘ ಬಾಹ್ಯ, ವೃತ್ತಿಯಿಂ
ದಿಳಿಯೊ ಬಲು ಅಸಹ್ಯ, ಪ್ರಾಣಿ ೫

ಪರಿಪರಿಯ ದುಃಖ ಪೂರಿತವಾದ ಭವಶರಧಿ
ಹಿರಿದಾದ ತೆರೆಗಳಿಂದ, ಇದರೊಳಗೆ
ದುರುಳ ಜನಸಂಗದಿಂದ, ಹುದುಗಿಪ್ಪ
ಅರಿಷಡ್ವರ್ಗದಿಂದ, ಬಲು ಕೆಟ್ಟು
ಬರಿದಾಗುವೆಯೊ ಪುಣ್ಯದಿಂದ, ಪ್ರಾಣಿ ೬

ಎಷ್ಟು ಹೇಳಿದರೇನು, ಎಷ್ಟು ಕೇಳಿದರೇನು
ಎಷ್ಟೆಷ್ಟು ಕೂಗಲೇನು, ಹರಿಯ ಮನ
ಮುಟ್ಟಿ ಭಜಿಸದ ನರನು, ದಿನದಿನಕೆ
ಕೆಟ್ಟು ಕೇವಲ ಪೋಪನು, ವೇಣು ಗೋಪಾಲ
ವಿಠ್ಠಲ ಗತಿ ದೂರನು, ಪ್ರಾಣಿ ೭

### ೩೨ ರಾಗ ಮುಖಾರಿ ತ್ರಿಪುಟತಾಳ

ಬಂದೆ ಬಂದೆ ಸ್ವಾಮಿಯೆ, ಬಂದೆ ಬಂದೆ ಪ.
ಬಂದೆಬಂದೆ ಗೋವಿಂದ ಗೋವಳ
ಬಾಂಧವ-ಭಕ್ತವತ್ಸಲ
ಇಂದಿರೇಶ ಶ್ರೀವೆಂಕಟ ನಿನ್ನ
ಸಂದರುಶನಕೆ ಸಾಗಿ ನಾನಿಲ್ಲಿ ಅ.

ನಡೆದು ನಡಿಸುತ ನುಡಿದು ನುಡಿಸುತ
ಅಡಿಗಡಿಗೆ ಕಾಪಾಡುತ
ಒಡನೆ ಆಡುತ ಬಿಡದೆ ಕ್ಷಣವನು
ಸಡಗರದಿ ಕರೆತರಲು ನಾನಿಲ್ಲಿ ೧

ಆಪ್ತ ಅನಿಮಿತ್ತ ವ್ಯಾಪ್ತ ಸರ್ವತ್ರ
ಗುಪ್ತ ಗುಣಗಣ ಪೂರ್ಣನೆ
ಪ್ರಾಪ್ತ ನೀನೆನಗಾಗ ಬೇಕೆಂದು
ವ್ಯಾಪ್ತಿ ನಿನ್ನದು ಹುಡುಕುತಲಿ ನಾ ೨

ಬಂದುರೂಪದಿ ನಿಂದು ಎನ್ನಲ್ಲಿ
ಚಂದದಿಂ ಕರೆತಂದೆ ಇಲ್ಲಿ
ಒಂದರಿಯೆ ನಿನ್ನ ವಂದಿಸುವ ಬಗೆ
ಬಂದೊದಗೊ ನೀನೆನ್ನ ವದನಕೆ ೩

ಬಂದೆಬಂದೆ ನೀ ಬಂದಂತೆ ಕರೆ
ತಂದುದಕೆ ಫಲ ನೀನೆ ಬಲ್ಲೆ
ಸಂದರುಶನ ನಿನಗೆ ನೀ ವಾ
ಛ್ಛಂದವನು ನೋಳ್ಪಾತುರದಿ ನಾ ೪

ಏನುಕೊಡಲಿಲ್ಲ ಏನು ಬೇಡಲಿಲ್ಲ
ಏನುಪಡೆಯುಲೊ ಕರುಣಿಯೆ
ನೀನುಕೊಟ್ಟ ಸ್ವತಂತ್ರದ ಫಲ
ನಿನಗೆ ಅರ್ಪಿಸಬೇಕೆನುತ ಇಲ್ಲಿ ೫

ರಕ್ಷ ಶಿಕ್ಷಕ ಮೋಕ್ಷದಾಯಕ
ಸೂಕ್ಷ್ಮ ಘನಮಹ ವ್ಯಾಪಕ
ಕುಕ್ಷಿಯೊಳು ಜಗಧರಿತ ಪೂರಿತ
ಅಕ್ಷಯ ಫಲ ದಾಯಕ ೬

ನಮೊನಮೋ ನಾಗಾರಿ ವಾಹನ
ನಮೊನಮೋ ಸುರ ಸುಪ್ರಸನ್ನನೆ
ನಮೊನಮೋ ಗೋಪಾಲ ವಿಠಲ
ನಮಿಪ ಭಕ್ತರ ಸಲಹುವನೆಂದು ೭



೩೩ ರಾಗ ಸುರಟಿ ಆದಿತಾಳ

ಭಾರತಿ ಭಕುತಿಯನು ಕೊಡುವುದು
ಮಾರುತ ಸತಿ ನೀನು ಪ.

ಭಾರತಿ ಭಕುತಿಗೆ ಸಾರಥಿಯಾಗಿ ನೀ
ಪೂರೈಸಿ ಕರಪಿಡಿ ಮಾರುತನ ರಾಣಿ ಅ.

ಸುರರ ಸತಿಯರಿಗೆ, ಧರೆಯೊಳವ
ತರಿಸಿ ಶಾಪ ಪರಿದೆ
ದರುಶನ ಮಾತ್ರದಿ ವರವಿತ್ತು ಅವರಿಗೆ
ಪರಿಹರಿಸಿದೆ ಬಂದ ದುರಿತಗಳನು ತಾಯೆ ೧

ಜ್ಞಾನ ಶುಭಕಾಯಳೆ ಸಜ್ಜನರಿಗೆ
ಜ್ಞಾನ ಪ್ರದಾಯಕಳೆ
ಮಾನವ ಜನುಮದಿಂದೇನು ಸಾಧನವುಂಟು
ನ್ಯೂನ ಮಾಡಿಸದೆ ನಿದಾನದಿ ಪಾಲಿಸೆ ೨

ನಂಬಿದೆ ನಿನ್ನಪದ, ಯುಗಾಂಬುಜ
ದಿಂಬು ತೋರೆನಗೆ ನಿಜ
ಕಂಬು ಚಕ್ರಾಂಕಿತ ಗೋಪಾಲ ವಿಠಲನ
ಅಂಬಕದಲಿನೋಳ್ಪ ಸಂಭ್ರಮ ಪಾಲಿಸೆ ೩

೩೪ ರಾಗ ಶಂಕರಾಭರಣ ಆದಿತಾಳ

ಭ್ರಾಂತಿ ಬಿಡದೋ ಭಾಗ್ಯಪುರುಷನೆ ಪ.

ವಿಷಯಂಗಳ ಜರಿದು
ಶಾಂತ ಚಿತ್ತನಾಗೋತನಕ, ಹೇ ಪ್ರಾಣಿ ನಿನ್ನ ಅ.

ಕಾಲ ಕಾಲಕೆ ಹರಿಕಥಾಶ್ರವಣ
ಗುರುಗಳ ಮುಖದಿಂದ

ಕೇಳಿದ್ದೆ ಕೇಳುತ್ತ ಪೇಳುತ್ತ
ಮನನವ ಮಾಡುತ್ತ
ಕೇಳಿದಂತೆ ಧ್ಯಾನವ ಮಾಡುತ್ತ
ಮಾಡಿದ್ದನುಭವಕೆ
ಮೇಲಾಗಿ ಬಂದೊಂದಗುವತನಕ
ಹೇ ಪ್ರಾಣ ನಿನ್ನ ೧

ಪಾಂಚ-ಜನ್ಯ ಅರಿಪಾಣಿ ಸರ್ವೇಶ
ತದ್ರಾಣಿ ಲಕುಮಿ
ಅಂಜಿಗಮನ ವಾಯ್ವಾಣಿ ಭಾರತಿ
ಭುಜಂಗ ಪತಿಯು
ಪಂಚಾನನ ಖಗ ಸುತ್ರಾಮ ಕಾಮ
ಈ ಬಗೆ ತಾರತಮ್ಯ
ಪಂಚ ಭೇದವ ತಿಳಿಯೋತನಕ
ಹೇ ಪ್ರಾಣ ನಿನ್ನ ೨

ಪೂರಕ ಕುಂಭಕ ರೇಚಕದಿಂದಲಿ
ಹೃದಯಸ್ಥ ಭೌತಿಕ
ಮಾರುತನ ಜೈಸಿ ಅಣಿಮಾದಿ ಸಿದ್ಧಿ
ಅಷ್ಟಾಂಗ ಯೋಗ
ಧಾರಕನಾಗಿ ನಿಸ್ಸಂಗದಿ ಚರಿಸಿ
ಭಾರತಿಪತಿ ಸ
ಮೀರನೊಲಿಮೆ ಪಡೆಯೋ ತನಕ
ಹೇ ಪ್ರಾಣ ನಿನ್ನ ೩

ಅಂತಿ ಅಂಶಾವೇಶಾಧಿಷ್ಠಾನ
ಅಂತರ್ಯಾಮಿಗಳ
ಸಂಶಯ ರಹಿತದಿ ರೂಪಗಳ ತಿಳಿದು
ಕ್ರೋಧಾದಿಗಳಳಿದು

ಕಂಸಾರಿಯು ಕರುಣವ ಬಲವಮಾಡಿ
ಹಿಂಸೆಗಳೀಡ್ಯಾಡಿ
ಹಂಸೋಪಾಸಕ ನಾಗೋತನಕ
ಹೇ ಪ್ರಾಣ ನಿನ್ನ ೪

ಹಂಚು ಹಾಟಕ ಸಮದರ್ಶಿಯೆನಿಸಿ
ಶೀತೋಷ್ಣವ ಸಹಿಸಿ
ಸಂಚಿತ ಆಗಾಮಿಗಳ ದಹಿಸಿ
ಇಂದ್ರಿಯಗಳ ಜಯಿಸಿ
ಪಂಚ ವೃತ್ತ್ಯಾತ್ಮಕ ಮನ ವಶೀಕರಿಸಿ
ಧ್ಯಾನದಿ ಶ್ರೀಹರಿ
ಮಿಂಚಿನಂದದಿ ಪೊಳೆಯೋತನಕ
ಹೇ ಪ್ರಾಣ ನಿನ್ನ ೫

ವಿಷಯಿ ವಿಷಯಗಳಿರವನ್ನೆ ತಿಳಿದು
ವಶವಾಗದನ್ಯ
ವಿಷಯಗಳೆಂಬುವುದನ್ನು ನೆರೆ ತಿಳಿದು
ದುರಾಸೆ ತೊರೆದು
ಹಸಿವು ತೃಷೆಗಳ ಹಗಲಿರುಳು ಮರೆದು
ಹರಿದಾಸರ ಬೆರೆದು
ಕುಶಲವಾರ್ತೆಯ ಪೇಳೋತನಕ
ಹೇ ಪ್ರಾಣ ನಿನ್ನ ೬

ಸ್ವಾತಂತ್ರಾಸ್ವಾತಂತ್ರ್ಯವೆಂಬುದನು
ವಿವೇಕದಿ ತಿಳಿದು
ಸ್ವಾತಂತ್ರ್ಯ ಮುಖ್ಯನು ಹರಿಯೆಂದು
ಧ್ಯಾನಕ್ಕೆ ತಂದು
ಸ್ವಾತಂತ್ರ ನಾನಲ್ಲವೊಯೆಂದು
ಆಪ್ತನು ನೀನೆಂದು

ವ್ಯಾಪ್ತದರ್ಶಿ ಆಗೋತನಕ
ಹೇ ಪ್ರಾಣಿ ನಿನ್ನ ೭

ಸಕಲೇಂದ್ರಿಯಗಳಿಂದಲಿ ಹರಿಸೇವೆ
ಭಕುತಿಲಿ ಮಾಡುತ್ತ
ಕಕುಲಾತಿಯು ಹಗಲಿರುಳು ಬಿಡುತಲಿ
ಮುಖ್ಯದಿಂದಲಿ
ಲಕುಮಿಶ ಗೋವಿಂದನ ಮೂರುತಿಯು
ನಿಕರ ಯುಕ್ತಿದಿ
ಸುಖ ವಿಷಯನೆಂದರಿಯೋತನಕ
ಹೇ ಪ್ರಾಣಿ ನಿನ್ನ ೮

ಬಿಂಬ ಭಾವ ಕ್ರಿಯ ದ್ರವ್ಯಾದ್ವೈತವನು
ತಿಳಿದು ಸರ್ವಗತ
ಬಿಂಬನೆ ಮಮಸ್ವಾಮಿ ಗೋಪಾಲ ವಿಠ್ಠಲ
ನಲ್ಲದಿನ್ನಿಲ್ಲ
ಎಂಬೋದರಿತು ಅನ್ಯ ಸ್ವತಂತ್ರವ ಮರೆದು
ಸರ್ವ ವ್ಯಾಪಾರ
ಬಿಂಬ ಕ್ರಿಯವ ಕಾಣೋತನಕ
ಹೇ ಪ್ರಾಣಿ ನಿನ್ನ ೯

### ೩೫ ರಾಗ ಮುಖಾರಿ ಝಂಪೆತಾಳ

ಮುಖ್ಯ ಕಾರಣ ವಿಷ್ಣು ಸ್ವತಂತ್ರನೆ ಸತ್ಯ ಪ.
ಸಖ್ಯರ ಪೋಷ ಸಿರಿ ಅಜಭವಮರೇಶ ಅ

ತಿಳಿವೆಂಬುವ ನೀನೆ ತಿಳಿದು ತಿಳಿಸುವ ನೀನೆ
ತಿಳಿವ ವಸ್ತುವು ನೀನೆ ತೀರ್ಥಪದನೆ
ತಿಳಿದುದಕೆ ಫಲನೀನೆ ತಿಳಿಯಗೊಡದವ ನೀನೆ
ತಿಳಿವ ಸ್ವತಂತ್ರ ನಿನ್ನದು ತಿಳಿಸೊ ಸರ್ವೇಶ ೧

ಧ್ವನಿಯು ವರ್ಣೋದಯು ಶಬ್ದವಾಚ್ಯನು ನೀನೆ
ಗುಣದೇಶ ಕಾಲಕರ್ಮಗಳು ನೀನೆ
ತನುಕರಣ ವಿಷಯಮನ ಜೀವಸ್ವಾಮಿಯು ನೀನೆ
ಅಣು ಮಹಜ್ಜಗದ ಬಹಿರಂತರಾತ್ಮಕನೆ ೨

ವ್ಯಾಸ ಕಪಿಲಹಯಾಸ್ಯ ಧನ್ವಂತ್ರಿ ವೃಷಭ ಮಹಿ
ದಾಸ ದತ್ತಾತ್ರೇಯಾದ್ಯಮಿತ ರೂಪ
ಈ ಸುರೂಪವಿ ಜ್ಞಾನವಧಿಕಾರಿಗಳಿಗೊರೆದು
ಪೋಷಕನು ಇದೆ ಕೃಪಾಳುವೆ ಶ್ರೀಶ ೩

ಚೇತನನು ಅಹುದು ನೀ ಚೇಷ್ಟೆಯನು ಮಾಡಿಸಲ
ಚೇತನನು ಸರಿ ನೀನು ಸುಮ್ಮನಿರಲು
ಯಾತರವ ನಾನಲ್ಲ, ನಿನ್ನಂಘ್ರಿ ನಡೆಯೆಲ್ಲ
ಚೇತನನಹುದು ನೀ ಚಲಿಸೆ ಚಲಿಸುವೆನು ೪

ತಿಳಿಯೆನ್ನುವುದಕಾಗಿ ತಿಳಿಯತಕ್ಕುದು ನೀನೆ
ತಿಳಿಸೊ ಸ್ತೋತ್ರಮರೆಲ್ಲ ತಿಳಿದ ಶೇಷ
ತಿಳಿವಲ್ಲಿ ತಿಳಿಪಲ್ಲಿ ತಿಳಿವಳಿಕೆ ನೀನಾಗಿ
ಚಲಿಸದಲೆ ಮನನಿಲಿಸೊ ಗೋಪಾಲ ವಿಠಲ ೫

೩೬ ರಾಗ ನಾಟ ಝಂಪೆತಾಳ

ನಮೊನಮೋ ಹರಿಪ್ರಿಯ ನಮೊನಮೋ ಸುರಗೇಯ
ನಮೊನಮೋ ಗುರುರಾಯ ಮಧ್ವಮುನಿ ಜೀಯಾ ಪ.

ಧರೆಗೆ ಭಾರವಾಗಿ ಚರಿಸುತಿರೆ ಮಾಯಿಗಳು
ಧರಿಸಲಾರದೆ ಧರಣಿ ಸರಸಿಜೋದ್ಭವಗೆ
ಮೊರೆಯಿಡಲು ಅಜನಾಗ ಹರಸುರರ ಸಹವಾಗಿ
ಹರಿಯ ಸದನವ ಸಾರಿ ಅರುಹಿದನು ಇದನೆಲ್ಲ ೧

ಕಾವನಯ್ಯನು ವಸುಧೆ ಭಾವವನು ತಿಳಿದನಿಲ
ದೇವನೇ ನಿನಗೆ ಆಜ್ಞೆಯನೀಯಲು
ದೇವ ನೀನವತರಿಸಿ ಪಾವನವ ಮಾಡಿ ಸ
ಜ್ಜೀವಿಗಳಪೊರೆದೆ ದುರ್ಜೀವಿಗಳ ಸೀ ಮುರಿದೆ ೭

ಕಾಮವನು ಕಡಿದು ಸನ್ನೇಮವನು ಹಿಡಿದು ಬಹು
ಸೀಮೆಯೊಳು ವಾದಿಗಳ ಸ್ತೋಮ ತರಿದು
ಹೇಮ ಕಚ್ಚೂಲ ವೇಣುಗೋಪಾಲ ವಿಠ್ಠಲನ
ನಾಮ ಸುಧೆ ಸುಜನರಿಗೆ ಪ್ರೇಮದಲಿ ಸವಿಯಿತ್ತೆ ೮

೩೭ ರಾಗ ಸಾವೇರಿ ಆದಿತಾಳ

ನಡೆದು-ಬಾರೈಯ ನೀನು ಪ.

ನಡೆದು ಬಾರೈಯ ಭವ ಕಡಲಿಗೆ ಕುಂಭಸಂಭವ
ಸಡಗರದಿಂದ ಮೆಲ್ಲಡಿಯ ನಿಡುತ ಬೇಗ
ಎಡಬಲದಲಿ ನಿನ್ನ ಮಡದೇರಿಂದೊಪ್ಪುತ
ತಡಮಾಡದೆ ಬಾ ಮೃಡಸಖ ವೆಂಕಟ ಅ.

ವಿಜಯದಶಮಿ ಅಶ್ವಿಜಮಾಸ ಶುದ್ಧದಲ್ಲಿ
ನಿಜರಥಾ ರೂಢನಾಗಿ ಸುಜನರಿಂದೊಡಗೂಡಿ
ಗಜಸಿಂಹ ಮ-ಯೂರ ದ್ವಿಜಸಿಂಗ ಸಾರಂಗ
ಮಜಭಾಪುರೇ ಯೆನಲು, ತ್ರಿಜಗವು ತಲೆದೂಗೆ
ಅಜನು ಸ್ತುತಿಯ ಮಾಡೆ ಖಜುಗಣಾಧಿಪ ಪಾಡೆ
ಗಜಮುಖನಯ್ಯನು ನಿಜಾನಂದದಲಾಡೆ
ಭುಜಗಶ್ರೇಷ್ಠ ದ್ವಿಜರಾಜರು ಜಯವೆನ್ನೆ
ಕುಜನರೆದೆಯಮೆಟ್ಟಿ ರಜತಮ ಕಳೆಯುತ ೧

ದಕ್ಷಿಣದಿಕ್ಕಿನಲ್ಲಿ ರಾಕ್ಷಸರೆದುರಾಗಿ
ಅಕ್ಷೋಣಿ ಬಲ ನಿನ್ನುಪೇಕ್ಷೆ ಮಾಡುತ್ತಲಿರೆ

ಪಕ್ಷಿವಾಹನನೆ ನೀನಾಕ್ಷಣದಲ್ಲಿ ಖಳರ
ಶಿಕ್ಷಿಸಿ ಸುಜನರ ರಕ್ಷಿಸಿ ಮೆರೆದ್ಯೆಯ
ತಕ್ಷಕ ಸುತ ಸಹಸ್ರಾಕ್ಷನ ಮಗನನು
ಭಕ್ಷಿಸ ಬರುತಿರೆ ಈಕ್ಷಿಸಿ ರಥವನು
ತತ್‌ಕ್ಷಣನೆಲಕೊತ್ತಿ ಮೋಕ್ಷವ ಗ್ಯೆಸಿದೆ
ಕುಕ್ಷಿಯೊಳಗೆ ಜಗರಕ್ಷಿಪ ವಿಶ್ವ ೨

ಅಂಬುಜಾಕ್ಷನೆ ಬಾರೊ ಅಂಬುಜವದನನೆ
ಅಂಬುಜಾಲಯೆ ಪತಿ ಅಂಬುಜನಾಭನೆ
ಅಂಬುಜ ಭವಜನಕ ಅಂಬುಜಾರಿಧರ
ಅಂಬುಜನಿವಾಸ ಅಂಬುಜಮಿತ್ರ ತೇಜ
ಕೊಂಬು ಕಹಳೆಗಳು ಭೊಂ ಭೋರಿಡುತಿರೆ
ತುಂಬುರು ನಾರದರಿಂಬಾಗಿ ಪಾಡಲು
ಅಂಬರದಲಿ ವಾದ್ಯತುಂಬಿ ದಂಧಣರೆನ್ನೆ
ಸಂಭ್ರಮದಲಿ ಬಾರೊ ಶಂಭುವಂದಿತನೆ ೩

ಮನಕೆ ಬಾರಯ್ಯ ಸುದಾಮನ ಸಖಹರಿಯೆ ಸೋ
ಮನ ಧರಿಸಿದವನ ಮನ ಕುಮುದಕೆ ಚಂದ್ರ
ಮನೆ ಕೇಳೊ ಎನ್ನ ದುಮ್ಮನ ಪರಿಹರಿಸಿ ಒ
ಮ್ಮನಕೊಡು ಅಹಿಗಿರಿತಿಮ್ಮನೆ ಕೇಳೊ ಬಿನ್ನಪ
ಮನ ನಿನ್ನದು ಹೇ ಮನಸಿಜ ಜನಕ ಸು
ಮನಸರೊಡೆಯ ಬೊಮ್ಮನ ಪೆತ್ತನೆ ಸು
ಮ್ಮನೆ ತಡವೇಕೆ ನಿಮ್ಮನೆಯವರೊಡನೆ ಹಿ
ಮ್ಮನ ಮಾಡದೆ ಗಮ್ಮನೆ ಬಾ ವೆಂಕಟ ೪

ಪರಿಪರಿಯಿಂದಲಿ (ವಿಧದಲಿ) ಕರವ ಮುಗಿದು ನಿನ್ನ
ಕರೆದರೆ ಬಾರದ ಗರುವತನವು ಏಕೊ
ಕರಿಯ ಮೊರೆಯ ಕೇಳಿ ಸಿರಿಗೆ ಹೇಳದೆ ಬಂದೆ
ಕರಿರಾಜ ಆವ ನಿನ್ನ ಹಿರಿಯಪ್ಪನ ಮಗನೇನೊ

ಶರಣಾಗತ ರಕ್ಷಾಮಣಿ ಯೆನ್ನುವ
ಬಿರುದು ಬೇಕಾದರೆ ಸರಸರ ಬಾರಯ್ಯ
ಗರುಡಗಮನ ಗೋಪಾಲ ವಿಠಲರೇಯ
ಕರುವಿನ ಮೊರೆಗಾವು ನೆರೆದಂತೆ ಪೊರೆಯಲು

೩೮ ರಾಗ ಯದುಕುಲಕಾಂಬೋಧಿ ಆದಿತಾಳ

ನಾನೇ ಭ್ರಮಿಸಿದೆನೊ ವಿಷಯದಿ ಮಮತೆ
ನೀನೇ ಸೃಜಿಸಿದೆಯೋ ಪ

ಅನಾದಿ ನಿಧಾನ ನೀನೆ ತಿಳಿದು ನೋಡೊ ಅ

ಕೇವಲಾನಂದ ಚಿನ್ಮಯ ಜೀವನ್ನೈಜ ಸ್ವ
ಭಾವ ತ್ಯಜಿಸಿ ಅನ್ಯ ಭಾವವಾಶ್ರೈಸಲು
ಶ್ರೀವರ ನಿನ್ನ—ಬಂಧಕ ಶಕುತಿ
ಆವರಿಸೆನ್ನ--ಕಾವಳಗೊಳಿಸಿ
ಈ ವಿಧಬನ್ನ—ಬಡಿಸುತ್ತಿದೆ
ಕೈವಲ್ಯ ದರಸನೆ ನೀ ವಿಚಾರಿಸಿ ಕಾಯೊ ೧

ಸ್ವಾತಂತ್ರ ನೀನು ಅಸ್ವಾತಂತ್ರತರ ನಾನು
ದೂತನ್ನ ಈತೆರ ಕಾತರ ಗೊಳಿಪುದು
ವಿತರ ಘನವೋ—ಇದರಿಂದ
ಖ್ಯಾತೇನೂ ಫಲವೋ—ಎನ್ನೊಳು ನಿನ
ಗೇತಕೀ ಛಲವೊ—ಭವದಿ ಕೈ
ಸೋತು ಬಿನ್ನೈಸುವೆ ಮಾತು ಮನ್ನಿಸಿ ಕಾಯೊ ೨

ಕಕ್ಕಸ ಭವದೊಳು ತಕ್ಕಿಸಿ ಸಿಗಹಾಕಿ
ಸಿಕ್ಕು ಬಿಡಿಸದೆ ನೀ ನಕ್ಕು ಸುಮ್ಮನಿರಲು
ದಿಕ್ಕ್ಯಾರೊ ಎನಗೆ—ದಣಿದು ಮೊರೆ
ಯಿಕ್ಕುವೆ ನಿನಗೆ—ಒಲಿದು ಬೇಗ

ತರ್ಕೋಕ್ತಿಸೀಕ್ಷೈಗೆ—ಎನ್ನುವ ಗುಣ
ಲೆಕ್ಕಿಸದಲೆ ಕಾಯುಬಹುದೈಹು ಕೊನೆಗೆ ೩

ಪ್ರಿಯು ನೀನೆನಗೆಂದು ಅಯ್ಯ ನಿನ್ನ ನಂಬಲು
ವೈಯು ಮರೆಸಿ ವಿಷಯದ್ದುಯ್ಯಲಿ ಗೊಪ್ಪಿಸಿದೆ
ಸೈಯುಲೊ ಧೊರೆಯೇ—ಇಂಥವನೆಂದು
ಅಯ್ಯೋ ಮುನ್ನರಿಯೆ—ಕರುಣಿಯೆಂಬ
ಹಿಯ್ಯಾಳಿಸರಿಯೆ.—ಇನ್ನಾದರೂ
ಕೈಯ ಪಿಡಿಯಲು ಕೀರ್ತಿ ನಿನಗಲೊ ಧೊರೆಯೇ ೪

ಮೊದಲೆಮ್ಮಾರ್ಯರು ನಿನ್ನ ಪದನಂಬಲವರಘ
ವೊದೆದು ಸುಮ್ಮುದದಿ ಸಂಪದವ ನೀಡಿದೆಯಂತೆ
ಅದನು ಮರೆದೆಯೊ—ಶಕುತಿಯು ಸಾ
ಲದಲೆ ಜರಿದೆಯೊ—ಜನರು ಪೇ
ಳಿದ ಮಾತು ಪುಸಿಯೊ—ನಿಜ ತೋರಲು
ಬುಧನುತ ಗೋಪಾಲ ವಿಠಲ ಕೀರುತಿಯೋ ೫

## ೩೯ ಉಗಾಭೋಗ.

ನೀರಿನಲಿ ನಿಂತು ನಿಡುಗುಪ್ಪನಾರುವಗೆ ಗಂ
ಬೂರ ಕಸ್ತೂರಿ ಲೇಪನದ ಮುದವೊ
ಭಾರ ಬೆನ್ನಲಿ ಪೊತ್ತು ಕಾಲು ಕೈ ಮುದುಂದಗೆ
ಧೀರ ಶೇಷ ಶಯನದ ಮುದವೊ
ಮೋರೆಯಲಿ ನೆಲಕೆದರಿ ಬೇರುಗಳ ಮೆಲುವವಗೆ
ಸಾರ ಷಡ್ರಸ ಭೋಜನದ ಮುದವೊ
ಕಾರು ಕರುಳನ್ನು ವನಮಾಲೆ ಹಾಕಿದವಗೆ
ಹಾರ ಪದಕಾದಿಗಳ ಹಾಕಿದ ಮುದವೊ
ಮೂರಡಿಯ ಭೂದಾನವನ್ನು ಬೇಡಿದವಗೆ
ಸಾರಿದರಭೀಷ್ಟೆಗಳ ಕೊಡುವ ಮುದವೊ

ಧಾರುಣಿಯು ನಿತ್ತು ಕುಳ್ಳಿರೆ ಸ್ಥಳವಿಲ್ಲದವಗೆ
ಈರೇಳು ಲೋಕಗಳ ನಾಳ್ವ ಮದವೊ

ನಾರಿಯನು ಬಿಟ್ಟು ವನವನವ ಸಂಚರಿಸಿದಗೆ
ಮೂರುಧಾಮದಿ ರಮೆಯ ಭೋಗದ ಮದವೊ

ಊರನಾರಿಯರಿಂದ ಬೈಸಿಕೊಂಬುವನಿಗೆ
ವಾರಿಜಭವಸುರರ ವಂದನೆಯ ಮದವೊ

ಊರೆಲ್ಲ ನೋಡೆ ಬತ್ತಲೆಯಾಗಿ ನಿಂತವಗೆ
ಚಾರು ಪೀತಾಂಬರ ಉಡುವ ಮದವೊ

ಘೋರ ತುರಗವನೇರಿ ಹಾರಿಸ್ಯಾಡುವಗೆ
ವೀರ ಸಿಂಹಾಸನದಿ ಕುಳಿತಿರುವ ಮದವೊ

ಬಾರದಲೆ ತಪ್ಪದೊ ಹಿಂದಣ ಭವಣೆಗಳು
ದೂರ ವಿಚಾರಿಸಿಕೊ ವಾರಮಣನೆ

ಮೂರುದಿನದರಸುತನ ಸ್ಥಿರವೆಂದು ನೀನೆಚ್ಚಿ
ಸೇರಿದವರನು ಬಿಡುವುದು ಧರ್ಮವೇನೊ

ಶ್ರೀರಂಗರಾಜ ಗೋಪಾಲವಿಠ್ಠಲನೇಯ
ಸಾರಿದವರನು ಪೊರೆದು ಕೀರುತಿಯ ಪಡೆಯೊ

೪೦ ರಾಗ, ಮೋಹನ ಆದಿತಾಳ

ನಾಳೆ ಬರುವೆನೆಂದು ಪೇಳಿ ಮಧುರೆಗೆ ಪೋದ
ಬಹಳ ದಿನವಾಯಿತಲ್ಲೋ ಉದ್ಧವ ಪ

ಕೇಳಿದ್ಯಾ ನೀ ಬಾಹ ವೇಳೆಯಲಿ ಕೃಷ್ಣನ
ಆಲೋಚನೆಯೊಳಿದ್ದೆವೋ ಉದ್ಧವ ಅ.

ಪಳ್ಳಿವಾಸಿಗಳ್‌ ನಾವು ಪರಿಪರಿಯಲಂಕರಿಸಿ
ಒಲಿಸಿಕೊಂಬುದನರಿಯೆವೊ ಉದ್ಧವ

ಗೊಲ್ಲ ಸತಿಯರು ಸದಾ ಗೋರಕ್ಷಕರು ವೈಯು
ಗೊಲ್ಲು ತೊಳೆಯಲು ಅರಿಯೆವೊ, ಉದ್ಧವ
ಬಲ್ಲಿದನ ಸಹವಾಸ ಮಾಡ್ಯವನ ಮಹಿಮೆಗಳ
ಎಲ್ಲ ತಿಳುಹಿಸಿಕೊಂಡೆವೊ, ಉದ್ಧವ
ಚಲ್ವಗಂಗಳ ಚಪಳೆಯರು ಮಧುರ ನಾರಿಯರ
*ಒಲುಪೆಗೆ ನಾವೆದುರೇನೋ, ಉದ್ಧವ ೧

ಚೊಕ್ಕನಾದ ನಿತ್ಯ ತೃಪ್ತನಿಗೆ ಬೆಣ್ಣೆ
ಕಳ-ವಿಕ್ಕಿದೆವಲ್ಲವೋ, ಉದ್ಧವ
ಸಿಕ್ಕಿಸಿಕೊಂಡು ರಾಸಕ್ರೀಡೆಯಲಿ ಅವಗೆ
ಸೊಕ್ಕಿ ಉಕ್ಕಿನುಡಿದೆವೊ, ಉದ್ಧವ
ಕಕ್ಕುಲಾತಿಲಿ ಕಾಮಾಸಕ್ತನಾಗ್ಯವ ನಮಗೆ
ದಕ್ಕಿದನು ಎಂತಿದ್ದೆವೊ, ಉದ್ಧವ
ವಕ್ರಗತಿಯಾಗಿ ಅಕ್ರೂರ ಬಂದು ನಮ್ಮ
ಚಕ್ರಧರನಗಲಿಸಿದನೋ, ಉದ್ಧವ ೨

ಧೀರ ಸ್ವರಮಣ ದೋಷ ದೂರನ್ನ ಅಲ್ಪ ಬಹು
ಜಾರನೆಂದರಿದೆವಲ್ಲೋ, ಉದ್ಧವ
ಆರಾರ ಮನಕಿನ್ನು ತೋರದವನ ನಮ್ಮ
ಓರಗೆಯವನೆಂದರಿದೆವೋ, ಉದ್ಧವ
ಮಾರಾರಿ ಅಜಪರಿವಾರದೊಡೆಯನ ನಾವ
ಪೋರನೆಂದಾಡಿದೆವೋ, ಉದ್ಧವ
ನಾರಿಯರು ನಾವಲ್ಪದಾರಿದ್ರ ಧಿಟ್ಟರಿಗೆ
ಶ್ರೀರಮಣನೆಂತೊದಗುವನೋ, ಉದ್ಧವ ೩

ವಿಧಿಯು ಬದಿಲಿದ್ದರೂ ವಿಧಿಸುವುದ ನರಿಯದೆ
ಮದಡೆಯರಾದೆವಲ್ಲೋ, ಉದ್ಧವ

---

*ಒಲುಪು= ವೈಯಾರ

ಮದನನಾಟಕೆ ಮನವಿಕ್ಕಿ ಅವನಿಂದೊಂದು
ವಿಧ ತತ್ವ ತಿಳಿಯಲಿಲ್ಲೋ, ಉದ್ಧವ
ಚದುರೆಯರು ನಮ್ಮ ಬಿಟ್ಟು ಕದಲನಿವನೆಂದೆಂಬೊ
ಮದದಿ ಮೋಸಹೋದೆವೊ, ಉದ್ಧವ
ಮಧುರೆಯಿಂದೆಮ್ಮ ತಮ್ಮ ಹೃದಯದೊಳಿಪ್ಪೆನೆಂದು
ಚದುರ ಪೇಳಿಹನಂತೆಲೋ, ಉದ್ಧವ ೪

ಮತಿ ತಪ್ಪಿದೆವೊ ನಾವು ಸತಿಯರೆಲ್ಲೊಂದಾಗಿ
ರಥವ ನಿಲಿಸಡೆ ಹೋದೆವೋ, ಉದ್ಧವ
ಹಿತರಾರು ನಮಗೆ ಸಾರಥಿ ನೀನು ದೊರೆತಿರ
ಯತನಮಾಡುತಲಿದ್ದೆವೋ, ಉದ್ಧವ
ಪಥವ ತೋರಿಸೊ ನಮಗೆ ಮುಂದೆಮ್ಮ ಚೆಲ್ವ ಶ್ರೀ
ಪತಿಯು ಬಂದೊದಗುವಂತೆ, ಉದ್ಧವ
ಗತಿಯಾರೊ ಅವನಲ್ಲದರು ಗೋಪಾಲ ವಿಠ್ಠಲಾ
ಚ್ಯುತನ ಮಹಿಮೆ ಕಾಣೆವೋ, ಉದ್ಧವ ೫

೪೧ ರಾಗ (ನಾದನಾಮಕ್ರಿಯ) ಝಂಪೆ ಅಟತಾಳ

ರಕ್ಷಿಸೊ ವೆಂಕಟಗಿರಿರಾಜ ರವಿ ಶತತೇಜ
ಆಶ್ರಿತ ಕಲ್ಪಭೂಜ

ಶ್ಲೋಕ:—

ಶ್ರೀಮಾನ್ ಶೇಷಧರಾ ಧರಾಧಿಪ ಸದಾ ಶ್ರೀಮಾನ್ ಸುಸೌಖ್ಯಪ್ರದಾ
ಶ್ರೀ ಮಾಯಾ ಜಯಶಾಂತಿ ಕಾಂತಸ್ವರತಾ ಶ್ರೀವಿಷ್ಣು ಸಿದ್ಧೇಶ್ವರಾ
ಶ್ರೀಮತ್ಪದ್ಮಜ ಪಾರ್ವತೀಶವಿನುತಾ ಶ್ರೀಪಾದ ಪದ್ಮದ್ವಯಾ
ಸ್ವಾಮಿನ್ ದೇಹಿ ಸದಾತ್ವದೀಯ ಭಜನಂ *ಶ್ರೀಕಾಂತತ್ವಂ ಪಾಹಿಮಾಂ

ಪದ

ಹಾಟಕ ಮುಖರಿ ಸರಿತ್ತೀರ, ಕೃತಮಂದಿರ
ವೈಕುಂಠಾಗಾರ

---

*ಶ್ರೀಕಾಂತ ನೀಪಾಲಿಸೋ (ಪಾ.)

ಕೋಟಿ ಮನ್ಮಥ ಚಂದ್ರಭಾಸ್ಕರದ್ಯುತಿ ತಿರಸ್ಕಾರ
ಶ್ರಿತಮೋಹನಾಕಾರ
ಕೂಟಸ್ಥ ಅಖಿಳ ಲೋಕಾಧಾರ, ಸಂತತ ಪರಾ
ತ್ಪರ ಮನೋಹರಾ
ಕೈಟಭಮುಖ ಖಳಜಲಧರ, ಚಂಡ ಸಮಿರಾ
ದೀನ ಜನಮಂದಾರ ೧

ಶ್ಲೋಕ:—

ದೇಶಾಕಾಲ ಗುಣಾ ಅತೀತ ಅನಘಾ ದೇವೇಂದ್ರ ಸಂಸೇವಿತಾ
ದಾಶಾರ್ಹಾ ದಶರೂಪ ರೂಪ ಅಜಿತಾ ದಾಮೋದರಾ ಮಾಧವಾ
ಕಾಶೀಜಾಧವ ಚಿಹ್ನ ಕೋರ ಉಡುಪಾ ಕಾಳೀ ಫಣಾಮರ್ದನಾ
ಶ್ರೀಶಾಗೀಶ ಅಹೀಶ ಈಶವಿನುತಾ ಶ್ರೀವಿಷ್ಣು ನೀ ಪಾಲಿಸೋ ೨

ಪದ:—

ವಟುವೇಷ ಧರಿಸಿ ವಿಪ್ರರವೃಂದಾ, ವಂಚಿಸಿನಿಂದ
ಸನ್ನುತ ಮುನಿವೃಂದಾ
ನಟನೆಮಾಡುತ ಕುಂಡದೊಳಗಿಂದ, ನಲಿಯುತ ಬಂದ
ಹವಿರ್ಭೋಕ್ತ್ರಾನಂದ
ವಟದೆಲೆಯೊಳು ಮಲಗಿದ ನಂದ, ನಂದನ ಕಂದ
ಮೂಲಕಾರಣ ಗೋವಿಂದ
ಕುಟಿಲ ಕಟುಮತಿ ಖಳಕುಲಕೊಂದ, ಧೀರ ಮುಚುಕುಂದ
ವರದನೆ ಮುಕುಂದ ೨

ಶ್ಲೋಕ:—

ನಿತ್ಯಾನಂದ ಮಹೋದಧೇ ನಿರುಪಮಾ ನಿರ್ದೋಷ ಜ್ಞಾನಾತ್ಮಕಾ
ಸತ್ಯಾವಲ್ಲಭ ಸಾತ್ವತಾಂ ಕುಲಪತೇ ಸಾಯುಜ್ಯ ಸಾರೂಪ್ಯದಾ
ಸೂತ್ರಾಧಾರಕ ಹೃದ್ಗುಹಾಲಯ ಸದಾ ಸೂಷುಪ್ತಿ ಜಾಗ್ರತ್ಪ್ರದಾ
ಸತ್ಯೈಶ್ವರ್ಯ ಬಲಾದಿ ಸರ್ವಭರಿತಾ ಸರ್ವಾಪರೋಕ್ಷೀ ಸದಾ ೩

ಪದ:—

ವರಾಭಯ ಚಕ್ರದರ-ಧರ, ಚತುಷ್ಟಯ ಕರ
ಉರಪೀನ ವಿಸ್ತಾರ
ಸರಿಗೆ ಪದಕವೊಪ್ಪೆ ಕಂಧರ, ಕರ ಸಿಂಧೂರ
ಕರ ಪೋಲ್ವ ಕೇಯೂರ
ಬೆರಳಲ್ಲಿ ಮಾಣಿಕ್ಯದುಂಗುರ, ತೋಳ ಬಂಧುರ
ಶಾಲಿಗ್ರಾಮದ ಹಾರ
ಸಿರಿವತ್ಸಾಂಕಿತನಾಭಿ ಗಂಭೀರ, ಜಗದೋದ್ಧಾರ
ಸರ್ವಭುವನಾಧಾರ ೩

ಶ್ಲೋಕ:—

ಲಕ್ಷ್ಮೀವಕ್ಷಸು ಕುಂಕುಮಾಂಕಿತ ಪದಾ ಲಕ್ಷ್ಮೀವಿಲಾಸಾಸ್ಪದಾ
ಲಕ್ಷ್ಮೀಬಾಹು ಲತಾಶ್ರಯಾ ಭುಜಯುಗಾ ಲಕ್ಷ್ಮ್ಯಾ ಸದಾಲಿಂಗಿತಾ
ಲಕ್ಷ್ಮೀ ಅಕ್ಷಸು ಪದ್ಮಪದ್ಮನಿಪ್ರಿಯಾ ಲಕ್ಷ್ಮೀ ಮನೋನಾಯಕಾ
ಲಕ್ಷ್ಮೀಚಿತ್ತ ಚಕೋರ ಪೂರ್ಣ ಉಡುಪಾ ಲಕ್ಷ್ಮೀಶ ತ್ವಂ ಪಾಹಿಮಾಂ ೪

ಪದ:—

ಸುಖಮಯ ಮೀನ ಮಂದರಧರ, ಧರಾಮನೋಹರ
ನರಮೃಗಾಕಾರ
ನಖದಿಂದ ಬ್ರಹ್ಮಾಂಡ ಖರ್ಪರ, ಭೇದಿಸಿದ ಧೀರ
ರಾಜ ಕುಲ ಘನ ಕುಠಾರ
ಮುಖವ ಕಾಯ್ದ ಮಹ ನೃಪವರ, ಗೋಪೀ ಜನ ಜಾರ
ನಾನಾ ಲೀಲಾವತಾರ
ಮುಖಜ ವರದ ಮುಪ್ಪುರಹರ, ನುತಮುನಿವರ
ಕಲ್ಕಿ ದೀನಮಂದಾರ ೪

ಶ್ಲೋಕ:—

ರಂಗಾನಂಗಪಿತಾ ರಜೋತ್ತಮ ಗುಣಾಂರಾಜೀವ ಫುಲ್ಲೇಕ್ಷಣಾ
ಗಾಂಗೇಯಾಂಬರ ಹಾರ ನೂಪುರ ಲಸತ್ ಕಾಂಚೀ ಲತಾಶೋಭಿತಾ

ಸಂಗೀತಪ್ರಿಯ ಸಾರ ಸನ್ಮುನಿ ಜನಸಂಗಾ, ಅಸಂಗಾ ಅಜಾ
ಗಂಗಾ ತಾತ ವಿಹಂಗನಾಥ ಗಮನಾ ಶೃಂಗಾರ ಸಾರಾತ್ಮಕಾ ೫

ಪದ:—

ಸಟೆಯಿಲ್ಲದಲೆ ನಿನ್ನ ಪಾದವ, ಭಜಿಪರ ಭವ
ಸಿಂಧುವಿನ ಪ್ರಮಾಣವ
ಕಟಿಯಲ್ಲಿ ಕರವಿಟ್ಟು ತೋರುವ, ಭಕ್ತ ಕೈರವ
ಸ್ತೋಮ ಸೋಮನೆನಿಸುವ
ತಟಿತ ಕೋಟಿ ಪ್ರಭಾವವ, ಧಿಃಕರಿಸುವ
ಮುದ್ದು ಮಕುಟ ಕುಂಡಲವ
ಸ್ಫಟಿತ ಹಾಟಕ ಮಣಿ ಕಟಕವ ಹಾರಪದಕವ
ನಿಟ್ಟು ಮರೆವ ಶ್ರೀದೇವ ೫

ಶ್ಲೋಕ:—

ನಾನಾ ಜನ್ಮದಿ ಕಾಯವಾಚ ಮನಸಾ ಎನ್ನಿಂದಲೀ ಮಾಳ್ಪುದಾ
ಜ್ಞಾನಾಜ್ಞಾನ ಕೃತಾಖಿಳ ಕ್ರಿಯೆಗಳಾ ನಿನ್ನಿಂದ ಪ್ರೀತ್ಯಾಗಲೀ
ನಾನಾ ದ್ರವ್ಯದಿ ಕಾರ್ಯರೂಪ ಗುಣದೀ ಸರ್ವತ್ರ ಬಿಂಬಕ್ರಿಯಾ
ಜ್ಞಾನಾಮಾತುರವಿತ್ತು ನೀನೆ ಪೊರೆಯೋ ಪ್ರಾಣೇಶ ನಾರಾಯಣಾ ೬

ಪದ:—

ವಿಶ್ವತೈಜಸ ಪ್ರಾಜ್ಞ ತುರ್ಯಾತ್ಮಾ ಅಂತರಾತ್ಮ
ಪರಮಾತ್ಮ ಜ್ಞಾನಾತ್ಮಾ
ವಿಶ್ವತೋಮುಖ ಗುಣಗಣ ಭೌಮ, ಸಂತತಸಾಮ
ವಂದ್ಯನೆ ಸಾರ್ವಭೌಮ
ವಿಶ್ವನಾಟಕ ಋಗ್ಯಜುಸ್ಸಾಮ, ಆಗಮಸ್ತೋಮ
ಪ್ರತಿಪಾದ್ಯ ತ್ರಿಧಾಮ
ವಿಶ್ವಾಸದಿಂದಲಿ ತವನಾಮ, ಭಜನೆಯ ಕಾಮ
ಎನಗೀಯೊ ಶ್ರೀರಾಮಾ ೬

ಶ್ಲೋಕ:—

ಮಂದಾಹಾಸ ಮುಖೇಂದು ಸರದರುಶನಾದಿಂದಾಘ ಬೆಂದಪ್ಪುದೋ
ಒಂದೇ ವಂದನ ಮಾಡಲಾಕ್ಷಣ ಸುಖಾಸಂದೋಹ ಸಂದಪ್ಪುದೋ
ನಿಂದೂ ಅರ್ಚಿಸಿ ಸ್ತೋತ್ರಮಾಳ್ಪನು ಮಹಾನಂದಾವನೂ ಬಲ್ಲನೋ
ತಂದೇ ನಿನ್ನಯ ಸುಂದರಾಂಘ್ರಿ ಸತತಾ ಪೊಂದಿಪ್ಪುದೇ ಪಾಲಿಸೋ

ಪದ:—

ಮಾಡಲರಿಯೆನು ಸಾಧನವನು, ದುಷ್ಟ ಚಿತ್ತನು
ಪಾಪಕರ್ಮದಿರತನು
ಬೇಡುವೆ ಬಹುವಿಧ ಸುಖವನು, ಆಶಾಬದ್ಧನು
ಇದಕೆ ಗತಿಯೇನು
ಬೇಡಿದುದೆಲ್ಲ ಕೊಡುವೆ ನೀನು, ಎಂದು ಬಂದೆನು
ಆಶ್ರಿತ ಸುರಧೇನು
ಬೇಡದಂದದಿ ಮಾಳ್ಪ ಧೊರೆ ನೀನು, ಇದೇ ವರವನು
ನೀಡಬಹುದೈಯ ನೀನು

ಶ್ಲೋಕ:—

ಅನ್ಯಾವಾರ್ತೆಗೆ ಪೋಗಲೀಸದೆ ಮನಾ ನಿನ್ನಂಘ್ರಿಯೋಳ್ ನಿಲ್ಲಿಸೋ
ನಿನ್ನಾವಾರ್ತೆಯ ಕೇಳಿಸೈಯ ಕಿವಿಗೇ ನಿನ್ನನ್ನೆ ಕೊಂಡಾಡಿಸೋ
ನಿನ್ನಾ ಮೂರ್ತಿಯ ತೋರಿಸೈಯ ಮನಕೇ ನಿನ್ನರ್ಚನೇ ಮಾಡಿಸೋ
ನಿನ್ನಂತಾಗಲಿ ಸರ್ವ ಇಂದ್ರಿಯಗಳೂ ನಿನ್ನಾಳ್ಗಳೋಳ್ ಕೂಡಿಸೋ ೨

ಪದ:—

ಭಜಿಪ ಜನರ ಭಾಗ್ಯೋದಯಾ, ಭಾಗವತ ಧ್ಯೇಯ
ಶುಭ ಗುಣಗಣನಿಲಯ
ವಿಜಯ ಸಾರಥಿ ವೀತಾಖಿಳ ಹೇಯ, ವಿನಿರ್ಜಿತಮಾಯಾ
ವಿಪ್ರಗೋಸುರಪ್ರಿಯ
ತ್ರಿಜಗದೀಶನೆ ಅಪ್ರಾಕೃತಕಾಯ ಕವಿಜನಗೇಯ
ವೆಂಕಟ ಗಿರಿರಾಯಾ
ನಿಜಗುರು ಗೋಪಾಲ ವಿಠಲಯ್ಯ ನಮೋನಮೋ ಜೇಯ
ಬೇಗ ಪಿಡಿಯೆನ್ನ ಕೈಯ ೨

೪೨ ರಾಗ ದರ್ಬಾರ್ ಆಟತಾಳ

ರಾಮದೂತನ ಪಾದ ತಾಮರಸವ ಕಂಡ
ಆ ಮನುಜನೆ ಧನ್ಯನು ಪ.

ಶ್ರೀ ಮನೋಹರನಂಘ್ರಿ ಭಜಕ
ಸ್ತೋಮ ಕುಮುದಕೆ ಸೋಮನೆನಿಸುವ
ಭೂಮಿಯೊಳು ಯದುಗಿರಿಯ ಸೀಮೆಯ
ಕಾವ ವನದೊಳು ಪ್ರೇಮದಿಂದಿಹ ಅ.

ಕೋತಿರೂಪದಿ ರಘುನಾಥನಾಜ್ಞೆಯ ತಾಳಿ
ಪಾಥೋಧಿಯ ಲಂಘಿಸಿ
ಖ್ಯಾತ ಲಂಕೆಯಪೊಕ್ಕು ಶೋಧಿಸಿ
ಮಾತೆಯನು ಕಂಡೆರಗಿ ದಶಮುಖ
ಪೋತ ಖಳಕುಲ ವ್ರಾತ ಘಾತಿಸಿ
ಸೀತೆವಾರ್ತೆಯ ನಾಥಗರುಹಿದ ೧

ಪಾಂಡುಸುತನೆ ಪ್ರಚಂಡ ಗದೆಯನು ದೋ
ರ್ದಂಡದಿ ಧರಿಸುತಲಿ
ಮಂಡಲದೊಳು ಭಂಡ ಕೌರವ
ಚಂಡ ರಿಪುಗಳ ಖಂಡಿಸಿ ಶಿರ
ಚಂಡನಾಡಿ-ಸತಿಗೆ ಕರುಳಿನ
ದಂಡೆ ಮುಡಿಸಿದುದ್ದಂಡ ವಿಕ್ರಮ ೨

ಧಾರುಣಿಯೊಳು ದ್ವಿಜನಾರಿ ಗರ್ಭದಿ ಬಂದು
ಮೂರೊಂದಾಶ್ರಮ ಧರಿಸಿ
ಧೀರ ನೀನೇಳಧಿಕ ತ್ರಿದಶ
ಸಾರ ಗ್ರಂಥಗಳ್ ವಿರಚಿಸುತ ಮಹ
ಶೂರ ಶ್ರೀ ಗೋಪಾಲ ವಿಠಲನ
ಚಾರು ಚರಣಕೆ ಅರ್ಪಿಸಿದ ಗುರು ೩

೬೪ ರಾಗ ಮೋಹನ ಆದಿತಾಳ

ರಥದಿಂದ ರಥಕೆ ಬಾರೋ ಹರಿಯೆ
ಸುರರಿಗೆ ಸಿಂಧು
ಮಥಿಸಿ ಪೀಯೂಷವಿತ್ತ ದೊರೆಯೆ
ಶಂಖ ಗದಾಬ್ಜ
ರಥಾಂಗಧಾರ ದುರಿತ ಗಜ ಕೇಸರಿಯೆ
ಲೋಕ ಮೋಹಕ ಮ
ನ್ಮಥನೈಯ ನಿನಗಾರಿನ್ನು ಸರಿಯೆ
ಸೌಭಾಗ್ಯದ ಸಿರಿಯೆ

ಅಪ್ರತಿ ವಿಕ್ರಮ ದಶರಥಸುತನೆ ಜಯ
ದ್ರಥ ರಿಪು ಸಖನೆ ಪ್ರಥಮಾಂಗದೊಡೆಯ

ಆರು ಮೂರು ದ್ವಾರ ಪುರದಲ್ಲಿ
ನಾಡಿ ವನದೊಳಗೆ
ವಾರಿಜಾಪ್ತಕ ಚಿತ್ರ ವೀಧಿಯಲಿ
ಮಂಡಿತ ಕಲ್ಪ
ಭೂರುಹದ ನೆಳಲಿನ ತಂಪಿನಲಿ
ನವರತ್ನ ಖಚಿತ
ನೂರು ಸ್ತಂಭದ ತೇರುಪ್ಪುದಲ್ಲಿ
ಚಾಮೀಕರ ಪಲ್ಲವ

ತೋರಣ ಮೌಕ್ತಿಕಹಾರ ಚಂಪಕ ಮಂ
ದಾರ ಮಲ್ಲಿಗೆದಾಮ ವಾರದಿಂದೊಪ್ಪುತ
ವಾರುಣಿಪತಿಮಯ ಪೀಠದಲಿ ನಿನ್ನ
ನಾರೇರಿಂದೊಪ್ಪುತ ಮೂರುತಿ ಮುದದಿ

ಛತ್ರ ಚಾಮರಧ್ವಜ ಹಾವುಗೆಯು
ಕಾಳಿಂದಿದರ್ಪಣ

ನಾನು ಮಾಡುವ ಸ್ನಾನ-ನಿನಗದೆ ವಿಚಿತ್ರ
ಸ್ನಾನ ಗಂಧ ಸುವಸನ-ಉಪವೀತಸ್ರಕು ಅಚ
ಮನ ದೇಹವೆ ಭವನ-ಮನಸಿನ ಬಯಕೆಗಳು
ನಾನಾ ಮಣಿಗಣಾಭರಣ-ದೀಪವೆ ಸುಜ್ಞಾನ
ಕೋಣತ್ರಯ ಹೃದಯಾಬ್ಜ ಪೀಠವು
ಈ ನೆರೆದ ಜನರೇ ಆವರಣವು
ನಾನಾ ಕರ್ಮವು ಪುಷ್ಪ ತುಲಸಿಯು
ಘ್ರಾಣ ಇಂದ್ರಿಯ ವಿಷಯ ಧೂಪವು
ಪಾನ ಉಂಬನ್ನವೆ ನೈವೇದ್ಯವು
ಕಾಣಿಕೆ ಭಕ್ತಿ ಗತಿ ಪ್ರದಕ್ಷಿಣೆ
ಶೈನ (ಶಯನ) ಮನವು, ನುಡಿಯೆ ಮಹ ಜಪ
ಏನು ಕಂಡು ಕೇಳಿದ್ದೇ ಸುಖ
ಶ್ರೇಣಿ ನಿನ್ನ ಪ್ರತಿಮೆಗಳು ಜಗ
ತ್ರಾಣ ಗುರುಗೋಪಾಲ ವಿಠ್ಠಲ
ದೀನವತ್ಸಲ ಸಾತ್ವತಾಂಪತೆ
ನೀ ನಿರುತ ಒಲಿದೆನ್ನ ಪಾಲಿಸೊ ೩

೪೬ ರಾಗ ನವರೋಜು ಆದಿತಾಳ

ಶ್ರೀ ಮಹಾಲಕ್ಷ್ಮಿ ಮಾತೆ ತ್ರಿಭುವನ ಜನನಿ
ಶ್ರೀಮಂತ ವಿಷ್ಣುವಾಮಾಂಕ ಸದನಿ ಪ
ತಾಮರಸಾಸನ ವ್ಯೋಮಾಳಕಸುರ
ಸ್ತೋಮವಿನುತೆ ಹೇ ಸೋಮ ಸಹೋದರಿ ಅ.

ಗುಣತ್ರಯಾತ್ಮಕ ಚೂಲಿಯನು ಅಲಂಕರಿಸಿ
ವನಜಭವಾಂಡ ಪಾತ್ರೆಯನಲ್ಲಿರಿಸಿ
ಗಣನೆಯಿಲ್ಲದ ಜೀವಧಾನ್ಯ ತುಂಬಿರಿಸಿ
ಜನರ ಯೋಗ್ಯತೆ ಉದಕವನಲ್ಲಿ ಬೆರೆಸಿ

ಮಿನುಗುವ ಕರ್ಪೂರ ಇಂಧನ ಕಾಲವೆ ಮಹಾ
ಅನಳ ಜನರ ಸಾಧನವೆಂಬದರ್ವಿಲಿ
ಇನಿತು ಪಾಕವಮಾಡಿ ಘನಮಹಿಮನ ಭೋ
ಜನಕನುಕೂಲಮಾಡ್ವ ವನರುಹನಯನೆ
ನಿಲಯ ಶಯ್ಯ ತಾಂಬೂಲಾಯುಧ ಚೇಲ
ಜಲಜಮಂದಾರ ಚಂಪಕ ಮೊಲ್ಲೆ ಬಕುಳ
ತುಲಸಿ ಕೇತಕಿ ದಿವ್ಯ ಗಂಧ ಪರಿಮಳ
ವಲಯ ಕಿರೀಟ ಕುಂಡಲ ರತ್ನಮಾಲಾ
ಹೊಳೆವನು ನವನವ ಕಳೇವರ ಕೊಳುತಲಿ
ಹಲವು ವಿಧಾರ್ಚನೆಗಳಲಿ ಪತಿಯನು
ಒಲಿಸಿ ವಲ್ಲಭನ ತೋಳಲಿ ಬಿಗಿದಪ್ಪಿದ
ಬಲುಸುಖ ಜಲಸಿಧೆ ಸಲಹೆ ನಮಿಸುವೆ
ಕಮಲ ಕುಟ್ಮಲ ರದನದ ಭಯಸುಪಾಣಿ
ವಿಮಲ ಸುಧಾಕರ ನಿಭ ಶುಭವದನೆ
ಭ್ರಮರ ಕುಂತಳೆ ಹೇಮಾಂಬರ ಚಾರು ಶ್ರೋಣಿ
ಅಮಿತ ಸುಗುಣೆ ಶೋಭಿತ ಅಬ್ಜಸದನೆ
ತಮಹಾ ಗೋಪಾಲ ವಿಠಲನರ್ಧಾಂಗಿಯೆ
ಸಮರೂಪ ಸಮಕಾಲ ಸಮದೇಶ ವ್ಯಾಪುತೆ
ರಮೆ ಅನುಪಮೆ ಸಮೆ ನಮಿಸುವೆ ಎನ್ನ ಭವ
ಶಮಲನಳಿದು ಹೃತ್ಕಮಲದಿ ಹರಿ ತೋರೆ ೩

## ೪೭. ಸುಳಾದಿ

### ಧ್ರುವತಾಳ

ಎಲ್ಲಿಯ ಸ್ವರವಿದು ಏನು ರಮ್ಯವೆ ಅವ್ವ
ಎಲ್ಲಿಯ ಪುರುಷನು ಎಂಥಾ ಚೆಲುವನು ನೋಡೆ
ಹುಲ್ಲೆ ಗೋವ್ಗಳ ಹಿಂಡು ಚೆಲ್ಲಾಟಗಳೇನೆ
ವಲ್ಲಭರುಗಳ ನಾಟ್ಯಗಳನು ನೋಡೆ

ಕುಳ್ಳಿರ್ದ ಗಿಳಿ ಹಂಸೆ ಕುಲಗಳೆಲ್ಲವು ತಾವು
ನಲಿದಾಡುವ ಬಗೆ ಏನೆ ರಮಣಿ
ಕಲ್ಲು ಕರಗುವಂತೆ ವರದ ಗೋಪಾಲ ವಿಠಲ
ಬಲ್ಲಿದ ಕೊಳಲನೂದುವ ಸಖಿಯೆ ೧

ಮಠ್ಯತಾಳ

ಕಂಗಳಿಗೆ ತಂಗಿ ಹಬ್ಬವಾಯಿತೆ ಅವ್ವ
ಮಂಗಳ ಮಹಿಮ ಶ್ರೀರಂಗನ ಕಂಡೆನೆ
ಪೊಂಗೊಳಲೂದುತ್ತ ಪಾಡುತಲಿಹ ಪರಮ
ಮಂಗಳ ಪುರುಷನ್ನ ಕಂಗಳಿಂದಲಿ ಕಂಡೆ
ಹಿಂಗದೆ ವರದ ಗೋಪಾಲವಿಠಲನ್ನ
ಸಂಗ ಸಂಗಿಗಳ ಸಹವಾಸದಿಂದ
ಮಂಗಳವಾಯಿತೆ ಮಾನಿನಿ ರನ್ನಳೆ ೨

ತ್ರಿಪುಟತಾಳ

ಜಪವನರಿಯೆ ಲೇಶ ತಪವನರಿಯೆ ತಾಯೆ
ಉಪವಾಸ ಒಂದಾದರು ತಾಳದೆ
ಅಪಹಾಸಮಾಡದೆ ವರದ ಗೋಪಾಲವಿಠಲ
ಕೃಪಣವತ್ಸಲ ತಾನೆ ಕೃಪೆ ಮಾಡಿದ ೩

ಅಟತಾಳ

ಪೇಳಿದಂತಲ್ಲದೆ ನೋಡಿದೆ ಆದರನ್ನೆ
ಪೇಳಲಾರೆನೆ ಎನ್ನ ಮನದ ಹರುಷವನ್ನು
ತಾಳಲಾರೆನೆ ಅವನ ಅಗಲಿ ಒಂದು ಕ್ಷಣ
ಕೇಳೆಲೆ ವರದ ಗೋಪಾಲ ವಿಠಲನ್ನ
ಕಾಲಿಗೆನ್ನಕೊರಳ ಕಟ್ಟಿಕೊಂಬೆನೆ ೪

ಆದಿತಾಳ

ವಿಜಯ ಕಂಡ ರೂಪವು ಇದೇ ಎಂದು
ನಿಜವಾಗಿ ತಿಳಿದೆನೆ ನೀರಜದಳನಯನೆ

ಅಜನೈಯನು ಸಿರಿಕೃಷ್ಣನು ಬಲುಹೆಂದು
ಯಜಿಪೆನೆ ಮನದೊಳು ವರದ ಗೋಪಾಲವಿಠಲನ
ಭಜಕ ಭಾಗ್ಯಾಂಭೋನಿಧಿಯೆಂದು

ಜೊತೆ

ಹಿಂದಿನ ಸುಕೃತವು ಬಂದು ಒದಗಿತೊ ಹೇಗೋ
ಸುಂದರ ವರದ ಗೋಪಾಲವಿಠಲನ ಕಂಡೆ

೪೮ ರಾಗ ದ್ವಿಜಾವಂತಿ (ಮಾಂಜಿ) ಛಾಪುತಾಳ

ವಂದಿಪೆ ಪುರಂದರ ದಾಸರ ಪಾದ
ದ್ವಂದ್ವಕೆ ನಾನು ನಿರಂತರ ಪ

ಮಂದರೋದ್ಧಾರ ಗೋವಿಂದ ಮುಕುಂದನ
ಎಂದಿಗು ವಂದಿಸುತಿರ್ಪರ ಅ

ಒದಗಿದ ಜ್ಞಾನವ ನೋಡಿಸಿ ಮತ್ತೆ
ಸದಮಲ ಜ್ಞಾನವ ಪಾಲಿಸಿ
ಪದುಮನಾಭನ ಕಥೆ ಪೇಳಿಸಿ ಸದಾ
ಮುದದಿ ಪಾಲಿಪರ ಧ್ಯಾನಿಸಿ ೧

ಮರೆಹೊಕ್ಕ ಸುಜನರಿಗಿಹಪರದ ಸುಖ
ತರಗಳನೊದಗಿಸಿ ಹರುಷದಿ
ಪರಮ ಭಕ್ತಿಯನೀವರೆಂದರಿದಾವಾಗ
ಸ್ಮರಿಸುವೆನವರಿಗೆ ಕರಮುಗಿದು ೨

ಅನಾಥ ಜನರನು ಮನ್ನಿಸಿ ವೇಣು
ಗೋಪಾಲ ವಿಠಲನ್ನ ಕಾಣಿಸಿ
ಜ್ಞಾನ ಭಕ್ತಿಯ ಪಥ ತೋರಿಸಿ ಕಾಯ್ವ
ಜ್ಞಾನಿಗಳರಸನ ತುತಿಸಿ ತುತಿಸಿ ೩

೪೯ ರಾಗ ಆನಂದಭೈರವಿ ಆದಿತಾಳ

ಶ್ರೀನಿವಾಸ ಸಲಹೊ ಎನ್ನನು ನೀನೆ
ಅನ್ಯರಕ್ಷಕರನು
ನಾನೆಲ್ಲಿ ಅರಸಿನೋಡಲು ಕಾಣೆ
ಕರುಣಾ ಸಾಗರನೆ ಪ.

ದೀನಜನರ ಸುರಧೇನೆನಿಸುವ ಜಗ
ತ್ರಾಣ ಪ್ರಾಣಪತೆ ಹೇ ನರಸಿಂಹ ಅ.

ಜನನೀ ಜನಕಾತ್ಮಜ ಮಿಕ್ಕಾದವರು
ದೇಹ ಬಾಂಧವರು
ಅನುಕೂಲ ಇದ್ದಾಗ ಹಿತರವರು
ನಿಮಿತ್ತವು ತೊಲಗೆ
ಅವರಾರೊ ಅವರಿಗೆ ನಾನಾರೊ
ಹಾಗಲ್ಲದಿನ್ನು
ಅನುಗಾಲ ಸಲಹುವರ ನೀ ತೋರೊ
ಹಾಗೇನೊ ನೀನು
ಜನನ ಮರಣ ಸ್ಥಿತಿ ಜನುಮ ಜನುಮದಲ್ಲಿ
ಕ್ಷಣ ಬಿಡದಲೆ ಪೊರೆವನಿಮಿತ್ತ ಬಂಧು ೧

ಮನಸಿನ ದೌರಾತ್ಮ್ಯಕ ವೃತಾಂತ
ವಿಸ್ತರಿಸಿ ಪೇಳೆ
ಎನಗೆ ಲಜ್ಜೆ ಬಾಹುದು ಶ್ರೀಕಾಂತ
ಕರಣಗಳು ತಮ್ಮ
ಮನೆಯ ದೂತನವಮಾಡಿ ತನ್ನಂತ
ಶಳೆದೊಯ್ಯು ಎನಗೆ
ಅನುಕೂಲವಾಗಿ ಬಾರದೊ ಶಕ್ತ
ಮೋಹಕೆ ವಶನಾಗಿ

ಕ್ಷಣ ಕ್ಷಣದಲಿ ಪರಧನ ವನಿತೆಯರ ಚಿಂ
ತನೆಯೊಳ್ ಮುಳುಗಿಸಿ ದಣಿಸುತಲಿಹುದೊ ೨

ತತ್ವಾಭಿಮಾನಿ ದಿವಿಜರೆಲ್ಲ
ಎನ್ನಯ ದುರ್ವಿಷಯದ
ಖತಿಯಿಂದಲೊಮ್ಮೆ ತೋರಿಸಲಿಲ್ಲ
ಪಾಪ ಕರ್ಮದಲಿ
ರತನನ್ನು ನೋಡಿ ದಣಿಸುವರಲ್ಲ
ಇದಕೆ ಎನ್ನಪ್ರ
ಯತನವೊಂದು ನಡೆಯದು ನೀಬಲ್ಲೆಲ್ಲ
ಉಪಾಯವು ಮತ್ತಿಲ್ಲ
ವಿತತಾಚ್ಯುತ ಮಾರುತಿ ನೀನೊಲಿಯಲು
ಪ್ರತಿಕೂಲರೆ ಅತಿಹಿತರಾಗುವರೈ ೩

ಅನಘಾ, ಯಮರಾಯ ಬಡಿಸುವ ಭಂಗ
ಎಷ್ಟೆಂದು ನಾನು
ನಿನಗೆ ಪೇಳಲೊ ಭವಗಜಸಿಂಗ
ಇನ್ನೆಷ್ಟು ದಿವಸ
ಅನುಭವಿಸಲೊ ಹೇ ನಿಸ್ಸಂಗ
ಹೀಗೆ ಮಾಡುವುದಕೆ
ನಿನಗೆ ನಾ ದ್ವೇಷಿಯೇನೊ ರಂಗ
ಕಾರುಣ್ಯಾಪಾಂಗ
ಚಿನುಮಯ ತನುಪತಿ ಅನಿಮಿತ್ತ ಸಖನೆಂ
ದೆನಿಸಿ ಇನಿತು ನೀ ದಣಿಪುದು ಘನತೆಯೆ ೪

ಬಾಲತ್ವ ಗರ್ಭವಾಸ ಜರೆಯು
ಮೊದಲಾದ ಕಷ್ಟಕೆ
ತಾಳಲಾರದೆ ನಿನ್ನ ಮರೆಯ
ಹೊಕ್ಕೆನೊ ಒಲಿದು

ಲಾಲಿಸಿ ಭವರೋಗದ ಕರೆ ಕರೆಯು
ತೊಲಗಿಸಿ ನಿನ್ನ
ಆಳಾಗಿ ಬಾಳುವ ಘನ ಸಿರಿಯು
ಇತ್ತನುದಿನ
ಪಾಲಿಸು ಶುಭೋದಯ ಪಾಲಾಂಬುಧಿ ಶಯ್ಯ
ಶ್ರೀಲ ಶ್ರೀ ಗುರು ಗೋಪಾಲವಿಠಲ ೫

೫೦ ರಾಗ ಮೋಹನ ಆದಿತಾಳ

ಶ್ರೀ ವೆಂಕಟೇಶ ಪಾಲಿಸೊ-ನಿನ್ನ ಶ್ರೀ ಪಾದ
ಸೇವಕರೊಳಗಾಡಿಸೊ ಪ.

ಕೇವಲ ಭವದೊಳು ಧಾವತಿಗೊಂಡು ನಾ
ಕಾವರ ಕಾಣದೆ ದೇವನೆ ಮರೆಹೊಕ್ಕೆ ಅ.

ಉದಿತ ಭಾಸ್ಕರ ಪ್ರಕಾಶ, ಶ್ರೀ ವೆಂಕಟೇಶ
ಪದುಮಾವತಿಯ ಪ್ರಾಣೇಶ
ಪದುಮ ಸಂಭವ ಭವ ತ್ರಿದಶಾಧಿಪನುತ
ಪದ ಪಂಕಜವೆನ್ನ ಹೃದಯದಿ ತೋರೊ
ಶ್ರೀಸದನ, ಹಯವದನ, ಜಿತಕದನ
ಕೃತ ಖಳ ಕುಲ ನಿಧನ ೧

ದಕ್ಷಿಣಾಕ್ಷಿವಾಸ ಈಶ, ಜಾಗರಾವಸ್ಥಾ
ಧ್ಯಕ್ಷನೆ ಕಾಯೊ ಹೃಷೀಕೇಶ
ಈಕ್ಷಿಸು ಕರುಣಕಟಾಕ್ಷದಿ ಎನ್ನಯ
ಸಾಕ್ಷಿಸೆ ನಿನ್ನಪರೋಕ್ಷವ ಪಾಲಿಸೊ
ಶ್ರೀವಕ್ಷ, ಕಮಲಾಕ್ಷ, ಸುರಪಕ್ಷ
ಭವ ಕರಿ ಹರಿಯಕ್ಷ ೨

ಉಣಲಾರ ಉಣಲಾರೆನೊ, ಈ ಕರ್ಮ ಫಲಕೆ
ಕೊನೆಗಾಣೆ ಕೊನೆಗಾಣೆನೊ
ಜನನುತ ಗುರು ಗೋಪಾಲ ವಿಠಲ ನಿನ್ನ
ನೆನೆವ ಜೀವನಕೆ ಜೀವನ ಮಾಡಿ ಪಾಲಿಸೊ
ಶ್ರೀಹರಿಯೆ, ಎನ್ನ ಧೊರೆಯೆ, ಹೀಗೆ ಪೊರೆಯೆ
ಉಪಕಾರ ನಾ ಮರೆಯೆ ೩

೫೧ ರಾಗ ಬೇಹಾಗ್ ಆದಿತಾಳ

ಶ್ರೀನಿವಾಸ ಬಾರೋ ಮನಕೆ, ನೀ ಬೇಗನೆ ಪ.

ನೀನು ಕುಣಿಸಿದಂತೆ ನಾನು ಕುಣಿವೆನಲ್ಲ
ದೀನು ಇದಕೆ ಅನುಮಾನಮಾಡದಲೆ ೧

ಪಾಪಿಯೆಂಬೆಯ ಎನ್ನ ಶ್ರೀಪತಿ ನಿನ್ನ ನಾಮಕೆ
ಪೋಪದ ಪಾಪಮಾಡಲಾಪೆನೆ ಎನೊ ೨

ಸಿರಿಯಿಂದೊಪ್ಪುತ ನಿನ್ನ ಪರಿವಾರ ಸಹಿತದಿ
ವರದ ಗೋಪಾಲ ವಿಠ್ಠಲನೆ ವಾರುತೆಗೆ ೩

೫೨ ರಾಗ ಭೈರವಿ ಅಟತಾಳ

ಆಕಳ ಕಾಯಿದ ಗೋಪಾಲ ವಾಸನು ಪ.

ಆಕಳ ಕಾಯಿದ ಗೋಕುಲ ವಾಸನ
ನೇಕ ಗುಣನಿಧಿ ನಾಕೇಶ ವಿನುತ
ಲೋಕ ಪಾಲಕ ಸಾಕಾರ ಮೂರುತಿ
ಏಕ ಮೇವ ದ್ವಿತೀಯ ಕೃಷ್ಣರಾಯ ಅ.

ಪುರದಲ್ಲಿದ್ದಂಥ ಕೇರಿಯ ಮಕ್ಕಳ
ನೆರಹಿ ಯಾದವ ಪರಿವಾರವೆಲ್ಲ

ತುರುವ ಕಾಯಲು ಹೊರ ಹೊರಡೆಂದು
ಕರೆದು ಸೂಚಿಸಿ ಹರುಷದಿಂದ
ಕರಣ ಕುಂಡಲ ಶಿರದಿ ಕಿರೀಟ
ಸಿರಿಮುಖಕೆ ಕಸ್ತೂರಿಯ ನಾಮವು
ಬೆರೆದು ಭೂಷಣ ಕೊರಳೊಳೊಪ್ಪುವ
ಸರಸ ಪೀತಾಂಬರಧರ ೧

ನಳಿನ ಕೇತಕಿ ಎಳೆಯ ಮಾವಿನ
ತಳಿರ ವನದ ಒಳಗೆ ರಂಗನು
ಕಾಳಿಂದಿ ತೀರದಿ ಗೆಳೆಯರ ಕೂಡಿ
ಮುಳೆಯು ಮಿಂಚಿನಂತ್ಹೊಳೆಯುತ್ತ
ಕೊಳಲನೂದುತ ಕಿಲಕಿಲಿನಗುತ
ಗಿಳಿ ಚಕೋರವು ಅಳಿಮಯೂರಾ
ವಳಿ ಬಳಿಯಲ್ಲಿ ಸುಳಿಯಲು ಕೃಷ್ಣ
ನಲಿವಾನಂದ ಪೇಳಲಳವಲ್ಲ ೨

ತೊಂಡರೊಡಗೂಡಿ ಪುಂಡರೀಕಾಕ್ಷ ಗೋ
ಹಿಂಡನು ಕಾಳಿಯ ದಂಡೆಯಲ್ಲಿರಿಸಿ
ಕೊಂಡು ಬಂದ ಬುತ್ತಿ ಹಿಂಡು ಮಕ್ಕಳಿಗೆ
ಉಂಡು ಉಣಿಸುತ್ತ ಪುಂಡಾಟದಿ
ಚಂಡು ಚಿಣ್ಣಿಕೋಲು ಕಂಡಕಂಡದು
ದ್ದಂಡ ಲೀಲೆಯನು ಕಂಡು ಖೇಚರದಿ
ಅಂಡಜ ಉಮೇಶ ಪುಂಡರೀಕೋದ್ಭವ
ಮಂಡೆಯನು ಬಾಗಿ ಕೊಂಡಾಡಲು ೩

ಕಡು ತೃಷ್ಣೆಯೊಳಾ ಮಡುವಿನುದಕ
ಕುಡಿದು ಗೋವ್ಗಳು ನಡುಗಿ ಬೀಳಲು
ಒಡಲೋಡಿದ ಆ ಹುಡುಗರೆಲ್ಲ ಕೂ
ಗ್ಯಾಡುತಲಿ ಮೊರೆಯಿಡಲಾಗ

ಮೃಡವಿನುತ ತಾನುಡಿಯ ನಾಲಿಸಿ
ಕಡಹದ ಮರನಡರಿಮೇಲೇರಿ
ನಡುನೀರಿನೊಳು ಸಿಡಿದು ಬೀಳಲು
ಗಡಬಡಿಸಿತು ಪೊಡವಿಯೆಲ್ಲ ೪

ಹೊಕ್ಕ ಭರದಿ ದೇವಕ್ಕಿಯ ಸುತನ
ಸಿಕ್ಕಿಸಿಕೊಂಡು ಬಾಲಕ್ಕೆ ಬಿಗಿಯಲು
ಲೆಕ್ಕಿಸದೆ ಕಾಲಿಕ್ಕಿ ಫಣಗಳಲ್ಲಿ
ಘಕ್ಕನೆ ತುಳಿದ ನಕ್ಕರದಿ

ಧಕ್ಕತತ್ಥೈಧಿಮ್ಮಿಕ್ಕೆಂದು ಕುಣಿಯಲು
ಸೊಕ್ಕು ಉಡುಗಲು ಘಕ್ಕನೆ ಕಾಳಿಂಕೆ
ದಿಕ್ಕು ಕಾಣದೆ ಪ್ರಾಣಕ್ಕೆ ಬಂದಿತೆಂದು
ಕಕ್ಕಸದಿಂದುಸುರಿಕ್ಕುತಿರೆ ೫

ಇಂದಿರಾ ಪತಿಯಾನಂದ ದಿಂದಾಡಲು
ಬಂದು ಬೊಮ್ಮ ವಾಯು ನಂದಿವಾಹನಮು
ರೇಂದಿರ ಸನಕ ಸನಂದನ ಸಕಲ
ವೃಂದಾರಕರೆಲ್ಲ ನಿಂದು ಭರ

ದಿಂದ ಹೂವರುಷ ಚೆಂದದಿ ಸುರಿಯಲು
ದುಂದುಭಿಗಳು ತಮ್ಮಿಂದ ತಾಮೊರೆಯೆ
ಗಂಧರ್ವರು ಮನಬಂದಂತೆ ಪಾಡಲು
ಸುಂದರ ನಾರೇರು ವಂದಿಸಲು ೬

ಉರಗ ಕನ್ಯೇರ ಮೊರೆಯಲಾಲಿಸಿ
ಕರುಣಿಯವರಿಗೆ ಗರುಡನ ಭಯ
ಪರಿಹಾರ ಮಾಡಿ ಸರ್ಪನೆ ನೀನಿದ್ದ
ಪುರಕ್ಕೆ ಪೋಗೆಂದು ಭರದಲ್ಲಿ

ಹೊರಗೆ ನೆರೆದ ಪರಿವಾರವೆಲ್ಲ
ಕರೆಯುಲವರ ಬೆರೆದು ಸರ್ವರ
ಭರದಿ ಪೊರೆದು ಮೆರೆದ ಲೋಕದಿ
ಕರುಣ ನಿಧಿಯು ಸಿರಿಧರ ೭

ಗರಳ ಭಯದಿ ಧರೆಗೆ ಬಿದ್ದಂಥ
ತರುಗಳಿಗೆ ಸ್ಮರಣೆ ಬಪ್ಪಂತೆ
ಹರಿಯು ಕೊಳಲ ಸ್ವರ ಪೂರಣವಾಡಿ
ಕರೆಯಲಾಗ ಲೆಚ್ಚರವಾಗೆ
ಕರುಣಾವಾರಿಧಿ ಕರಸ್ಪರುಶದಿ
ಪರಮ ಉಲ್ಲಾಸ ಭರಿತರಾಗಿನ್ನು
ತರಳರೆಲ್ಲ ತುತ್ತೂರಿಯ ನೂದುತ
ಪುರದ ದಾರಿಯ ತಿರುಗುತ ೮

ಮಂಗಳ ಮೂರುತಿ ಪೊಂಗೊಳಲೂದುತ
ತಿಂಗಳಿನಂದದಿ ಕಂಗಳು ಪೊಳೆಯೆ
ಅಂಗನೆರೆಲ್ಲರು ಶೃಂಗಾರವಾಗಿನ್ನು
ರಂಗವಾಲೆಯಿಟ್ಟರಂಗಣದಿ
ಭಂಗಾರದಾಭರಣಂಗಳ ಧರಿಸಿ
ಮುಂಗಟ್ಟಿ ನಿಂತರು ಸಂಗೀತ ಪಾಡುತ್ತ
ತುಂಗ ವಿಕ್ರಮ ಗೋಪಾಲ ವಿಠ್ಠಲಗೆ
ಮಂಗಳಾರುತಿಯೆತ್ತಿ ಶೃಂಗಾರದಿ ೯

## ೫೩ ಸುಳಾದಿ

ಧ್ರುವತಾಳ

ಒಂದಪರಾಧವೆಂದು ವಂದಿಸಲೇನಯ್ಯ
ಒಂದರ ಚಿಂತೆಯೆಂದು ಪೊಂದಿಸಲೇನಯ್ಯ
ಒಂದರ ಭಯವೆಂದು ಬೇಡಿಕೊಳಲೇನಯ್ಯ

ಒಂದರ ಹರುಷವೆಂದು ಒಪ್ಪಿಕೊಳಲೇನಯ್ಯ
ಒಂದರ ಕ್ಲೇಶವೆಂದು ಒದಗಿ ನುಂಗಲೇನಯ್ಯ
ಒಂದಲ್ಲ ಎರಡಲ್ಲ ವಿವರಿಸಿ ಹೇಳಲಿನ್ನು
ಒಂದಪರಾಧವೆ ಇವಕೆ ಕಾರಣ ಮೂಲ
ಇಂದಿರೆ ಅರಸ ಗೋಪಾಲ ವಿಠಲ ಕೃಷ್ಣ
ತಂದೆ ನಿಮ್ಮ ವಿಸ್ಮೃತಿ ಎನಗೆ ಮುಖ್ಯಾಪರಾಧ ೧

ಮಠ್ಯತಾಳ

ಜನನದ ಚಿಂತೆ ಜನಿಸುವಾಗಲಿ ಭಯವು
ಜನಿಸಿದರೆ ಹರುಷ ದಿನದಿನಕೆ ಆಸೆ
ಘನ ಆಸೆಯಿಂದ ಮೋಹ ಮೋಹದಿಂದ ಕ್ಲೇಶ
ಅನಂತರಪಾಯಗಳು ಒಂದೊಂದು ಅನಂತ
ಇನಿತಿನಿತು ಅಪಾವ ಘನ ಕ್ಲೇಶಗಳಿಂದ
ದಣಿದುದಣಿದುದಣಿದು ಧೈರ್ಯಭ್ರಷ್ಟನಾಗಿ
ಮುಣುಗಿ ತೇಲುವೆನಯ್ಯ ಮುಂದುಗಾಣದೆ ಇನ್ನು
ಘನ ದಯಾವಾರಿಧೆ ಗೋಪಾಲ ವಿಠ್ಠಲ
ನೆನೆಯದೆ ನಾನಿನ್ನ ಕೊನೆಗಾಣದೆ ಪೋದೆ ೨

ರೂಪಕತಾಳ

ಇಂದಿನ ಸಾಧನ ಏನು ಆದದ್ದು ಎಲ್ಲ
ಇಂದಿಗೆ ಇದರ ವಿಚಾರ ತಿಳಿಯಿತೊ
ಮುಂದಿನ ಗತಿಗೆ ಮುಕುಂದ ಪೊಂದುವ
ಚಂದವನರುಹಯ್ಯ ಸುಂದರಾಂಗ ದೇವ
ನಿಂದಲ್ಲಿ ಕುಳಿತಲ್ಲಿ ಬಂದಲ್ಲಿ ಪೋದಲ್ಲಿ
ತಂದು ನೀಡು ನಿನ್ನ ಚಂದುಳ್ಳ ಸ್ಮೃತಿಯನು
ನಂದನಕಂದ ಗೋಪಾಲ ವಿಠಲ ಆಪ್ತ
ಬಂಧು ಕರುಣಾಸಿಂಧು ಗತಿ ನೀನೆ ಹಿಂದೆ ಮುಂದೆ ೩

ಝಂಪೆತಾಳ

ಸಲಹುವ ನೀನಯ್ಯ ಸಲಹಿಕೊಂಬುವ ನಾನು
ಫಲಿತಾರ್ಥವೊಂದೆ ಸರಿ ಉಳಿದುದು ಏನ್ನೈಯು
ಹಲವುಪರಿ ಸಾಧನಗಳು ಕೂಡಿದರೇನು
ಕಳೆಯಬಲ್ಲುವೆ ಎನ್ನ ಭವರೋಗವ
ತಿಳಿದದ್ದೆ ಇಷ್ಟೆ ಸರಿ ನಳಿನನಾಭನೆ ನಿನ್ನ
ಸುಲಭ ಸ್ಮರಣೆಗಿಂತ ಮಿಗಿಲು ಇಲ್ಲ
ಚೆಲುವ ಕೇಳಯ್ಯ ಕೊಳ್ಳಯ್ಯ ನಿಲ್ಲಯ್ಯ
ಚಲಿಸಬೇಡೆನ್ನ ಮನದಿಂದಲಿನ್ನು
ಸಲಿಸಯ್ಯ ಸಂಸಾರ ಕೊಲೆಯು ತಾಳಲಾರೆ
ಬಳಲಿಬಳಲಿ ಬಾಯ ಬಿಡುತಲಿಹೆ
ಹೊಳೆಯುಜನಕ ನಮ್ಮ ಗೋಪಾಲ ವಿಠಲ ನೀ
ತಿಳಿಸಬೇಕು ಎನ್ನ ಸ್ಥಿತಿಗತಿಯು ೪

ತ್ರಿಪುಟತಾಳ

ಆವಾಗ ಎನಗಿನ್ನು ನಿನ್ನ ಸ್ಮೃತಿಯು ಬಂತೆ
ಆವ ದೇಶವೆ ಪುಣ್ಯ ದೇಶವೈಯು
ಆವ ಕಾಲದಲ್ಲಿ ನಿನ್ನ ಸ್ಮೃತಿಯು ಬಂತೆ
ಆವ ಕಾಲವೆ ಪುಣ್ಯ ಕಾಲವೈಯು
ಆವ ಸಂಗತಿಯಿಂದ ನಿನ್ನ ಸ್ಮೃತಿಯು ಬಂತೆ
ಆವ ಸಹವಾಸವೆ ಸಜ್ಜನ ಸಹವಾಸ
ಆವ ನಿನ್ನ ಸ್ಮರಣೆ ರಹಿತವಾದ ಕರ್ಮ
ದೇವಾರ್ಚನಾದರು ಏನು ಫಲವೊ
ನಾವೊಲ್ಲೆನೈಯು ನಿನ್ನ ಸ್ಮರಣೆ ರಹಿತನಾಗಿ
ಜೀವಿಸಿ ಕೊಂಡಿನ್ನು ವ್ಯರ್ಥವಾಗಿ
ಪಾವನಕಾಯ ಗೋಪಾಲ ವಿಠಲ ನಿನ್ನ
ಸರ್ವದಾ ಸ್ಮರಿಸುವವನೆ ಜೀವನ್ಮುಕ್ತ ೫

ಏಕತಾಳ

ನಿನ್ನ ಸ್ಮೃತಿಯೆ ವಿಧಿವಿಸ್ಮೃತಿ ನಿಷೇಧ
ಪುಣ್ಯವೆಂದರು ಇದೆ ಪಾಪವೆಂದರು ಇದೆ
ಇನ್ನಿಲ್ಲ ಇನ್ನಿಲ್ಲ ಇದರಂತೆ ಸಾಧನ
ಸ್ತನ್ಯಪಾನವ ತಾ * ಉಣಲೊಲ್ಲನು ಪುನಃ
ಇನ್ನೊಂದು ಅವಗಿಲ್ಲ ಇದೆ ಇದೆ ಉಪಾಯ
ತನ್ನ ಮೊದಲುಮಾಡಿ ತೃಣಜೀವ ಕಡೆಯಾಗಿ
ಚೆನ್ನಾಗಿ ತತ್ವೇಶರಿನ್ನು ಲಕುಮಿ ಸಹಿ
ತಿನ್ನವರ ವರ್ಗ ತನ್ನಿಯಾಮಕನಾಗಿ
ವನ್ನೆ ಅಂತರ್ಯಾಮಿ ಇವನ್ನೆ ಮಾಡಿಪ ಎಂಬ
ಇನ್ನಾವ ಸ್ಮೃತಿಯೇನು ಪುಣ್ಯ ಸಾಧನವೈಯ
ಘನ್ನದಯಾನಿಧಿ ಗೋಪಾಲ ವಿಠ್ಠಲ
ನೀನರಿಯದನ್ಯ ಪುಣ್ಯ ಪಾಪಗಳಿಲ್ಲ ೬

ಆದಿತಾಳ

ನಿನ್ನರಿಯದವನೆ ಅಜ್ಞಾನಿ ಅಯ್ಯಯ್ಯ
ನಿನ್ನರಿಯದಜ್ಞಾನಿ ಅನ್ಯಥಾಜ್ಞಾನಿಯಯ್ಯ
ಅನ್ಯಥಾಜ್ಞಾನ ಈಗ ಅಧಮ ಜೀವಿಗಳಿಗೆ
ಇನ್ನು ಮಿಥ್ಯಾಜ್ಞಾನವನ್ನು ಪುಟ್ಟಿಪುದೈಯ
ಇನ್ನು ಆದುದಜ್ಞಾನ ಅರಿತು ಜ್ಞಾನಕ್ಕೆ ನೀನು
ಮುನ್ನ ಪ್ರೇರಕನಾಗಿ ಮುದದಿಂದ ಮಾಡಿಸುವಿ
ಘನ್ನ ಸ್ವಾಮಿಯು ನೀನು ನಿನ್ನವರವ ನಾನು
ನಿನ್ನ ತಿಳಿವ ಜ್ಞಾನ ಇನ್ನು ಎನಗೆ ಇತ್ತು
ಜನ್ಮ ಮರಣದ ಬಾಧೆಯ ಬಿಡಿಸಿನ್ನು
ಚೆನ್ನಾಗಿ ಸಲಹಯ್ಯ ಗೋಪಾಲ ವಿಠ್ಠಲ ೭

ಜತೆ

ಅಪರಾಧ ಅನಂತ ಮಾಡಿ ನಾ ಮರೆಹೊಕ್ಕೆ
ಅಪಾರ ಕರುಣಿ ಗೋಪಾಲ ವಿಠಲ ಕಾಯೊ

೫೪ ಉಗಾಭೋಗ

ಹಲ್ಲಣವಿಲ್ಲದ ಕುದುರೆ ಹತ್ತಿ ಓಡಿಸಿದಂತೆ
ಬೆಲ್ಲ ಹಾಕದ ಪರಮಾನ್ನದಂತೆ
ಇಲ್ಲದೆ ಹುಟ್ಟು ಹರಿಗೋಲನೇರಿದಂತೆ
ಸೊಲ್ಲಿಗೆ ಬುಡದಲ್ಲಿ ಅಳೆದಂತೆ ಸಾಧನ
ಎಲ್ಲ ಒಂದೆ ಎಂಬ ಜ್ಞಾನವುಂಟಾದವ
ಎಲ್ಲ ಸಾಧನಗಳ ಮಾಡಲೇನು
ಬೆಲ್ಲ ಬೇವಾಗುವುದವನಿಗೆ
ಎಲ್ಲ ಕಡೆಯಲ್ಲಿ ನೋಡಿ ಮುದ್ದು ರನ್ನ
ಮಲ್ಲ ಮರ್ದನ ಗೋಪಾಲ ವಿಠ್ಠಲನಂಘ್ರಿ
ಪಲ್ಲವವನು ಕಾಣ ಎಲ್ಲಿ ಪೋದರನ್ನ

೫೫ ರಾಗ ತೋಡಿ ಅಟತಾಳ

ಪೊಗಳಲೆನ್ನಳವೆ ನಿನ್ನ ಗುರುಗಳರನ್ನ ಪ.
ಪೊಗಳಲೆನ್ನಳವೆ ನಿನ್ನಗಣಿತ ಮಹಿಮೆಯ
ಖಗವಾಹನದೂತ ತ್ರಿಜಗದೊಳ್ಪ್ರಖ್ಯಾತ ಅ.

ವಸುಧೆಯ ಮೇಲಿನ್ನು ಅಸುರರು ಪುಟ್ಟಿ ತ್ರಿ
ದಶರನ್ನು ಬಾಧಿಸೆ ಕುಸುಮ ಸಂಭವಗೆ ವಂ
ದಿಸಿ ಮೊರೆಯಿಡಲಾಗ ಬಿಸಜನಾಭನು ಇದ್ದ
ದೆಸೆಗೆ ಪೋಗಿ ತಮ್ಮ ಕುಶಲಗಳನು ಪೇಳೆ
ನಸುನಕ್ಕು ಬೇಗನೆ ದಶರಥನಲ್ಲಿ ಉ
ದಿಸಲವನ ಸೇವೆಯುದ್ದಿಶ್ಯ ಸಕಾಗಿ ಅಂಜನೆ

ಬಸುರಲ್ಲಿ ಸಂಜನಿಸಿ-ಅಕ್ಷಣ ತಾವು
ರಸ ಸಖನಿಗೆ ಲಂಘಿಸಿ-ಇಂದ್ರನ ಚಾಪ
ಕೊಸರಿ ನಿರಾಕರಿಸಿ-ಅಸುರರ ಜೀವ
ದುಸುರನು ಸೆಳೆದಂಥ ಅಸಮ ಪರಾಕ್ರಮಿ ೧

ಕಂಜಮಿತ್ರನ ಸುತನೊಡನೆ ಸಖ್ಯವಮಾಡಿ
ಕಂಜನಾಭನ ಪಾದಕ್ಕೆರಗಿ ಮುದ್ರಿಕೆಗೊಂಡು
ಮಂಜಿನುದಕ ಬಿಂದುವಂತೆ ವನಧಿದಾಟಿ
ಸಂಜೆಯುಚರನ ಪುರವ ಪೊಕ್ಕು ವನದೊಳು
ಕುಂಜರಗಮನೆಗೆ ಕುರುಹು ಕೊಟ್ಟಸುರರ
ಭಂಜಿಸಿ ಅಕ್ಷಕುವರನ ಸಂಹರವಮಾಡಿ
ಕಂಜ ಸಂಭವನಸ್ತ್ರಕೆ ಸಿಲ್ಕಿ ಅಸುರಗೆ

ಅಂಜದುತ್ತರ ನಡೆಸಿ-ದನುಜ ಬಲ
ಪುಂಜಗಳನೆ ಒರಸಿ-ಬಾಲದಲಿದ್ದ
ಪಂಜಿಲಿ ಪುರದಹಿಸಿ-ಮುರಳಿ ಬೇಗ
ಕಂಜಜಾಂಡದ ಧೊರೆಗೆರಗಿದ ಮಹಧೀರ ೨

ವಾನರ ನಿಕರವ ನೆರೆಹಿ ಸೇತುವೆ ಕಟ್ಟಿ
ಶ್ರೀನಾಥನಿಗೆ ವಾಹನನಾಗಿ ದನುಜರೊಳ್
ನಾನಾಯುಧಧರನು ಕೊಂದು ಗಿರಿಯ ತಂದು
ದಾನವೇಂದ್ರನ ರಾಮ ಮುರಿಯಲಾಕ್ಷಣ ವೇಗ
ಜಾನಕೀ ಕೃತಿ ತಂದು ಹರಿಗೆ ಅರ್ಪಣೆಮಾಡಿ
ದೀನ ವಿಭೀಷಣನಿಗೆ ಪಟ್ಟವನು ಕಟ್ಟಿ
ಆ ನಾರದರು ಹರಿಯಾಜ್ಞೆಯಿಂದಲಿ ಬಂದು
ಹೀನ ದಶಾಸ್ಯನ ಗೆಲಿದ ಜಯವಂಶನು

ನೀ ನೆವೆ ಎಂತೆಂದೆನೆ-ನಿನಗೆ ಇನ್ನು
ಏನುಬೇಕೋ ಬೇಡೆನ್ನೆ-ನಿನ್ನ ಪಾದ
ಧ್ಯಾನನಿರತ ನೀಡೆನ್ನೆ-ಭಳಿರೆ ಶ
ತಾನಂದ ಪದವಿಯ ಕೊಂಡ ಬಲುಧೀರ ೩

ಕೃಷ್ಣನ ಸೇವೆಗೋಸುಗ ಕುಂತಿಜನಾಗಿ
ಹುಟ್ಟಿದಾಕ್ಷಣ ಬೆಟ್ಟ ಕುಟ್ಟಿ ಹಿಟ್ಟನೆಮಾಡಿ
ಕೊಟ್ಟ ವಿಷವನುಂಡು ಅಹಿಗಳನೊರೆಸಿ ಕೈ
ಕಟ್ಟಿ ಜಲದೊಳಿಡೆ ಬಂದು ಲಕ್ಷಾಗೃಹ
ಸುಟ್ಟು ಭಸ್ಮವಮಾಡಿ ಹಿಡಿಂಬನನು ಕೊಂದು
ಧಿಟ್ಟ ಘಟೋತ್ಕಚನ ಪಡೆದು ದನುಜೆಯಲ್ಲಿ
ಶಿಷ್ಟದ್ವಿಜನಿಗೊಲಿದು ಬಕನ ಸಂಹರಮಾಡಿ
ಕೃಷ್ಣೆ ಸ್ವಯಂವರದಿ ಜಿಷ್ಣುವಿಂದಲಿ ಲಕ್ಷ್ಯ

ಕುಟ್ಟಿ ಕನ್ನಿಕೆ ವರಿಸಿ-ಅಲ್ಲಿಗೆ ಬಂದ
ದುಷ್ಟರ ಸಂಹರಿಸಿ-ಶಲ್ಯನ ವ್ಯೋಮ
ಕಿಟ್ಟು ನೆಲದಲ್ಲರಿಸಿ-ಇಂದ್ರಪ್ರಸ್ಥ
ಪಟ್ಟವನಾಳಿದ ಶೂರ ಸವಿಾರ ೪

ವೀರರಾಯರನೆಲ್ಲ ಸೆರೆಯನಾಳುವಂಥ
ಕ್ರೂರಜರೆಯ ಸುತನೊಡನೆ ಯುದ್ಧವಮಾಡಿ
ಚೀರಿ ಬೊಬ್ಬಿಡುತಲಿ ಅವನ ಸೀಳಿದ ಶಬ್ದ
ವಾರಿಜಜಾಂಡ ಪಡೆದುದಕಿಮ್ಮಡಿಯಾಗೆ
ಮೂರೇಳು ದಿಕ್ಕು ಜಯಿಸಿ ರಾಜಸೂಯ ಯಾಗ
ಪೂರೈಸಿ ಕೃಷ್ಣಗೆ ಅಗ್ರಪೂಜೆಯಮಾಡಿ
ಅರಣ್ಯದಲಿ ಪೋಗಿ ಮಣಿಮಂತ ಕಿಮ್ಮಾರ
ಕ್ರೂರ ಜಟಾಸುರಾದಿ ದೈತ್ಯರ ಕೊಂದು

ವಿರಾಟ ನಗರದಿ ತರಿದು ಕೀಚಕರನು
ಧೀರ ಗೋವ್ಗಳ ಬಿಡಿಸಿ-ಅಕ್ಷೋಹಿಣಿ
ಮೂರಾರುಗಳ ಬೆರಸಿ-ಪಾರ್ಥನಧ್ವಜ
ಕ್ಕೇರಿ ಶಬ್ದವ ಘೋಷಿಸಿ-ಕೌರವ ಬಲ
ಆರಕ್ಷೋಹಿಣಿ ಸಂಹಾರವಮಾಡಿದ ಧೀರ ೫

ನಡುರಣದಲಿ ಬಂದು ಘುಡಿಘುಡಿಸುತ ನಿಂದು
ಜಡ ಜಂಗಮರೆಲ್ಲ ನಡುಗೆ ದುಶ್ಶ್ಯಾಸನ
ನ್ನಿಡಿದು ಕೆಡಹಿ ಬಡಿದೊಡಲು ಬಗೆದು ರಕ್ತ
ಕುಡಿದಂತೆ ತೋರಿಸಿ ಮಡದಿಗೆ ಕರುಳನು
ಮುಡಿಸಿ ಸುಯೋಧನನೊಡನೆ ಗದಾಯುದ್ಧ
ಬಿಡದೆ ಜಡಿದು ಮಾಡಿ ಒಡೆಯನಾಜ್ಞದಿ ತೊಡೆ
ಕಡಿದು ಪೊಡವಿಮೇಲೆ ಕೆಡಹಿ ಅಗ್ರಜಾನುಜ
ರೊಡನೆ ಸಾಮ್ರಾಜ್ಯವ ಸಡಗರದಿಂ ಮಾಡಿ

ಹಿಡಿದು ಕಲಿಯ ಭಂಜಿಸಿ-ಅಧರ್ಮವ
ಕೆಡಿಸಿ ಅಸಮನೆನಿಸಿ-ಸನ್ಮಾರ್ಗವ
ದೃಢಭಕ್ತರಿಗೆ ತೋರಿಸಿ-ಲೋಕದಿ ಖ್ಯಾತಿ
ಪಡೆದು ಮೆರೆದೆ ಶರ್ವನೊಡೆಯ ಭಾರತಿ ಪ್ರಿಯ ೬

ದಶ ಉಪನಿಷತುಗಳಿಗೆ ಟೀಕವಮಾಡಿ
ಪೊಸ ಗೀತಾಭಾಷ್ಯ ಋಗ್ವ್ಯಾಖ್ಯಾನ ವೇದಾಂತ
ಅಸಮ ತಾತ್ಪರ್ಯ ನಿರ್ಣಯ ದ್ವಾದಶಸ್ತೋತ್ರ
ಕುಶಲದಿ ಯಮಕ ಭಾರತಗ್ರಂಥವ ಮಾಡಿ
ಕುಸುಮನಾಭತೀರ್ಥ ನರಹರಿತೀರ್ಥರು
ಎಸೆವ ಮಾಧವತೀರ್ಥ ಅಕ್ಷೋಭ್ಯತೀರ್ಥರಿ
ಗುಸುರಿ ಸರ್ವಾರ್ಥ ಸಾರವ ತೋರಿ ಗ್ರಂಥವ

ವಸುಧೆಯು ಮೇಲಿರಿಸಿ, ರಂಜಿಸುತಲಿ
ಬದರಿಗೆ ನೀಗಮಿಸಿ, ವ್ಯಾಸಮುನಿ
ಬಿಸಜಪಾದಕೆ ನಮಿಸಿ, ಮರಳಿ ಬಂದು
ದಶದಿಶಗಳಗೆದ್ದ ದಶಪ್ರಮತಿರಾಯ ೮

ಪಾಳಕ ಮುಷ್ಟಿ ಅಷ್ಟವು ದಿಗ್ವಿಜಯರಾಮ
ಲೋಲ ವಿಠ್ಠಲ ನರಹರಿ ಮುನಿತಂದಂಥ
ಮೂಲ ಸೀತಾರಾಮ ಹಯಗ್ರೀವ ಮೂರುತಿ
ಸಾಲಿಗ್ರಾಮ ಶಂಖ ಮೊದಲಾದ ಪದಾರ್ಥ
ಭೂಲೋಕದೊಳು ನಿಮ್ಮ ಪೀಳಿಗೆಯಲಿ ನಿಲಿಸಿ
ಶೀಲತ್ರಿವಿಕ್ರಮ ಪಂಡಿತಾಚಾರ್ಯರ
ಬಾಲ ನಾರಾಯಣ ಪಂಡಿತಾಚಾರ್ಯರಿಗೆ

ಶೀಲಜ್ಞಾನವ ಬೋಧಿಸಿ, ಸೊತ್ತ ಕೈಕೊಂಡು
ಖೂಳಮಾಯ್ಗಳ ಭಂಜಿಸಿ, ಅವರ ಮತ
ಗಾಳಿ ಮಾಡಿ ಓಡಿಸಿ, ಸಿದ್ಧಾಂತವ
ಮೇಲೆ ಮೇಲೆಂದೆನಿಸಿ, ಬದರಿಯಲ್ಲಿ
ಮೂಲೋಕಾಧಿಪ ವ್ಯಾಸಮುನಿಯ ಸೇವಿಪಧೀರ- ೯

ಮೂರ್ಹತ್ತು ಎರಡು ಲಕ್ಷಣವುಳ್ಳ ಸುಕಾಯ
ಮೂರವತಾರ ಮುಖ್ಯಪ್ರಾಣರಾಯ
ಮೂರೆರಡು ರೂಪ ಮುನಿಕುಲ ಪ್ರದೀಪ
ಮೂರುಕೋಟಿ ರೂಪ ಮೂರೆರಡರಿ ಲೋಪ
ಮೂರೆಂಟು ತತ್ವೇಶರಿಗೆ ನಿಯಾಮಕ
ಮೂರೇಳು ಸಾವಿರ ಮೂರೆರಡು ನೂರ್ಮಂತ್ರ

ಮೂರೊಂದವಸ್ಥೇಲಿ ಜೀವರಿಂ ಮಾಡಿಪ
ಮೂರೊಂದು ಶರಿರವ್ಯಾಪ್ತ, ಮಧ್ವರಾಯ
ಮೂರುತಾಪ ನಿರ್ಲಿಪ್ತ, ಶಕ್ತಮುನಿ
ಮೂರು ಲೋಕದಿ ಖ್ಯಾತ ಮುಕುತಿ ಪ್ರದಾತ ೧೦

ಆನಂದ ತೀರ್ಥ ನಿಜಾನಂದಚರಿತ ಪಂ
ಚಾನನ ಸುರಮುಖ್ಯಾದ್ಯರಿಗೆಲ್ಲ ನೀಮುಖ್ಯ
ಪ್ರಾಣನೆ ಅಹಿಪರ್ವತವ ನುಂಗುಟವಿ ವಿಪಾಟಿ
ಶ್ರೀನಾಥನು ನಿನ್ನ ಬಲವೆಷ್ಟು ಪೇಳಿನೆ
ಈ ನಳಿನ ಜಾಂಡವ ಒಡೆದು ತಾಳವಮಾಡಿ
ಅ-ನಾಯಾಸದಲಿ ಘೋಷಿಸುವೆನೆಂದುಸುರಿದೆ
ದಾನವ ಸಮುದಾಯ ತಿಮಿರ ಮಾರ್ತಾಂಡನೆ
ಜ್ಞಾನಮಯಾನಂದ ಗೋಪಾಲವಿಠಲನ
ಧ್ಯಾನಲೋಲತಿಬ-ಲ, ಭಕ್ತರದೋಷ
ಕಾನನ ದಾವಾನಳ ಸ್ವರೂಪದ
ಆನಂದ ಕೊಡುವ ಶೀಲ, ಸುಮನಸರ
ಮಾನಸ ಚಕೋರಸೋಮ ಸದ್ಗುಣಧಾಮ ೧೧

೫೨ ರಾಗ ಆರಭಿ (ಭೈರವಿ) ಆದಿತಾಳ

ಕಾಪಾಡೆಲೆ ಸಕಲ-ಪದಧಾರಿಣಿ
ಕೊಲ್ಲಾಪುರಗತ ಕಮಲೆ ಪ.

ಈಪರಿ ಹರಿಯ ದಯಾಪಾತ್ರಳೆ ಶುಭ
ನೂಪುರಾದಿ ಸುಕಲಾಪೆ ಶೋಭಿತೆ ಭ್ರೂ
ಚಾಪ ಚಲನದಿಂದಾ ಪವಮಾನನಿ
ಗೆ-ಪದದೇ ಭವತಾಪಗಳಳಿದು ಅ.

ಇಂದೀವರ ವರ ಮಂದಿರ ನಂದಿನಿ, ಚಂದ್ರಜಯಿಪ ವದನೆ
ಬೃಂದಾರಕ ಮುನಿವಂದಿತ ಪದಯುಗೆ ಕುಂದ ಕುಟ್ಮಲರದನೆ
ಮದನೆ-ಮುಕುಂದ ಹೃದಯಸದನೆ
ಇಂದ್ರನೀಲ ನಿಭಸುಂದರ ತನುಗುಣ
ಸಾಂದ್ರ ಇಂದುಮುಖಿ ಮಂದರಧರ ಗೋ
ವಿಂದ ಬಾಧ,ನುತೆ ಬೃಂದಾವನಪತಿ
ನಂದನಂದನನಾನಂದಿನಿ ವಂದಿತೆ ೧

ಕನ್ಯಾಮಣಿ ಜಗನ್ಮಾನ್ಯಾಮೃತ ಪಾವನ್ನಾಧರಬಿಂಬೆ
ಘನ್ನಕಲಶ ಕುಚವನ್ನು ಧರಿಪ ಕಟಿಸಣ್ಣ ಘನನಿತಂಬೆ
ಅಂಬೆ-ಚಿನ್ನ ಪುತ್ಥಳಿಬೊಂಬೆ
ಅನ್ನ ವಸನ ಧನಧಾನ್ಯಕಾಗಿ ಪರ
ರನ್ನ ಯಾಚಿಸಿ ಬಲು ಖಿನ್ನನಾಗುತಲಿ
ನಿನ್ನನು ಮರೆದೆನು ಎನ್ನವಗುಣಗ
ಳನ್ನು ಎಣಿಸದಿರು ಮನ್ನಿಸು ಬಿನ್ನಪ ೨

ಲೋಲ ಕುಂಡಲ ಕಪೋಲಶೋಭಿತ ಕೀಲಾಲಜಾತ ಪಾಣಿ
ಕೇಳಿಲಿ ಯಮುನಾಕೂಲದಿ ಹರಿ ದುಕೂಲಚೋರನ ರಾಣಿ
ಜಾಣೆ-ಶುಶ್ರೋಣೀ ಜಗತ್ರಾಣಿ
ಕಾಳಕೂಟ ಸಮಕೇಳು ವಿಷಯದಲಿ
ಬೀಳುವುದೆಸಮನಗಾಲಿಸಿ ಶ್ರೀ ಗೋ
ಪಾಲವಿಠಲನನುಗಾಲ ಸೇವೆಯೊಳು
ಶೀಲವೀಯೆಯೆಂದು ಕೇಳುವೆ ಲಾಲಿಸೆ ೩

೫೪ ರಾಗ ಸಾವೇರಿ ಆದಿತಾಳ

ವರದಾ ಸೀ ಪೊರೆಯೆಂದು
ಕರೆಯಲಾಕ್ಷಣ ಬಂದು
ನೆರವೆ-ಬಂದು ನೆರವೆ
ಅಭೀಷ್ಟವ ಕರೆವೆ ಪ.
ನಿರುತ ನಿನ್ನಯ ಚರಣ ಶರಣರ
ಪೊರೆವ ಕಾರ್ಯ ಧುರಂಧರನೆ ಸಿರಿ ಅ.
ಮಡುವಿನೊಳ್ ಮಕರಿ ಕಾ
ಲ್ಪಿಡಿದು ಸೆಳೆಯೆ ಜವ
ಪಿಡಿಯೆ-ಜವಸಿಡಿಯೆ
ಕುತಿಸಿ ನಿನ್ನ ಕರೆಯೆ

ಮಡದಿಯೊಡ ನುಡಿಯದಲೆ ಸಂಗಡಿ
ಗೆಡಬಲದವರ ಕಡೆಗೆ ನೋಡದೆ
ತಡೆಯದಲೆ ತಡಿಗೊದಗಿ ಕರಿಯಾ
ತೊಡರು ಬಿಡಿಸಿದೆ ಕಡು ದಯಾನಿಧೆ ೧

ತೊಡೆಯಿಂದ ನಡೆಯೆಂದು
ನುಡಿದು ಕೆಡಹೆ ಧ್ರುವ
ಮಿಡುಕೆ-ಧ್ರುವ ಮಿಡುಕೆ
ಕಂದನು ನಿನ್ನ ಹುಡುಕೆ
ಪೊಡವಿಯಡಿಯುಂಗುಟದಲೊತ್ತುತ
ದೃಢವ್ರತದಿ ತಪ ಜಡಿದು ಮಾಡಲು
ತಡೆಯದಲೆ ನೀನೊಲಿದು ಶೀಘ್ರದಿ
ಕೆಡದ ಪದವಿಯನೊಡನೆ ನೀಡಿದೆ ೨

ಕಡುಬಾಧೆ ಬಡಿಸಿ ನಿ
ನ್ನೊಡೆಯನೆಲ್ಲಿಹನೆಂದು
ನುಡಿಯೆ-ಎಂದು ನುಡಿಯೆ
ಕಂಭವ ತೋರಿ ಜಡಿಯೆ
ಸಿಡಿಲಿನಂದದಿ ಘುಡಿಘುಡಿಸಿ ಕೆಂ
ಗಿಡಿಗಳುಗುಳುತ ಹಿಡಿದು ಅಸುರನ
ಕೆಡಹಿ ಬಗೆದು ಒಡಲ ಭಂಗಿಸಿ
ದೃಢ ಭಕುತನಾಗಡಿಯ ನುಳುಹಿದ(?) ೩

ಮುಡಿ ಹಿಡಿದೆಳೆ ತಂದು
ನಡು ಸಭೆಯಲಿ ಉಟ್ಟ
ಉಡುಗೆ-ಉಟ್ಟ ಉಡುಗೆ
ಸೆಳೆಯೆ ಬಾಲೆ ನಡುಗೆ
ಒಡೆಯರೈವರ ದೃಢ ತಿಳಿದು ನಿ
ನ್ನಡಿಗಳಿಗೆ ಮೊರೆಯಿಡಲು ಪಾರ್ಥರ

ಮಡದಿಗಕ್ಷಯ ಉಡುಗೆ ತೊಡಿಸಿದ
ಬಡಾಪ ಬಲ್ಲಿದರೊಡೆಯ ಮಾನದ ೪

ಬಡತನದಲಿ ಭಂಗ
ಬಡುತಲಿರಲು ವಿಪ್ರ
ಮಡದಿ-ವಿಪ್ರ ಮಡದಿ
ಕಳುಹಲು ಬರೆ ದೃಢದಿ
ಮಡದಿ ರುಗ್ಮಿಣಿಯೊಡನೆ ಪಾರ್ವನ
ಅಡಿಗಳಿಗೆ ಪೊಡಮಡುತ ತಂದೊ
ಪ್ಪಿಡಿಯ ಅವಲಿಯ ಕೊಡಲು ಭುಂಜಿಸಿ
ಕಡು ಸಂಪದವ ಸಂಗಡಲೆ ನೀಡಿದೆ ೫

ಅಜಮಿಳ ವನದಲಂ
ತ್ಯಜ ವಿವಸ್ತ್ರಳ ಕಂಡಂ
ಗಜನ-ಕಂಡಂಗಜನ
ಬಾಣಕೆ ಸಿಲುಕಿ ಸ್ವಜನ
ಯುಜನೆ ಭಜನೆಯ ತ್ಯಜಿಸಿ ಕುಪ್ರಜೆ
ಸೃಜಿಸೆ ದ್ವಿಜನಿಗೆ ಕುಜನೆ ಬರೆ ಭಾ
ನುಜನ ಪ್ರಜೆಗಳಿಗಂಜೆ ನಿಜ ಆ
ತ್ಮಜನ ಕರೆಯಲು ದ್ವಿಜನ ಸಲಹಿದೆ ೬

ಈ ಪರಿಯಲಿ ಬಲು
ಆಪನ್ನ ಶರಣರ
ಪೊರೆದೆ-ಶರಣರ ಪೊರೆದೆ
ಸುಕೀರ್ತಿಯ ಮೆರೆದೆ
ಪಾಪಿ ನಾ ಬಲು ಎನ್ನ ಅವಗುಣ
ರಾಪುಮಾಡದೆ ನೀಪೊರೆ ಜಗ
ದ್ವ್ಯಾಪಿ ಗುರುಗೋಪಾಲ ವಿಠಲ ದ
ಯಾಪಯೋಬ್ಧಿ ಸುರಾಪಗಾಪಿತ ೭

ಮನದೊಳು ಧ್ಯಾನವ ಮಾಡುತ್ತ
ಊದುವ ಕೊಳಲ
ಧ್ವನಿಯು ಕರ್ಣದಿಂದ ಕೇಳುತ್ತ
ಬಂಧುಗಳ ಮಾತ
ಗಣನೆಮಾಡದಲೆ ಏರುತ್ತ
ಸಿನ್ನನರಸುತ್ತ
ತನುಮನ ನಯನಗಳ್ ಗಣನೆಗೆ ತಾರದೆ
ವನವನ ತಿರುಗುತ ಬಂದೆವೊ
ಮನಸಿಜ ಕೇಳಿಗೆ ಸಂದೆವೊ
ತನು ನಿನಗೊಪ್ಪಿಸಿ ನಿಂದೆವೊ
ಕ್ಷಣವನು ಅಗಲದಿರೆಂದೆವೊ
ಚಿನುಮಯ ಗುರುಗೋಪಾಲ ವಿಠಲ ಮಾ
ಮನೋಹರ ಮುನಿಜನ ಮನಮಂದಿರ ನಿ॥

೫೫ ರಾಗ ಕಾನಡ ಆಟತಾಳ

ರಾಮನಾಮ ಭಜಿಸಿದವಗೆ ಉಂಟೆ ಭವದ ಬಂಧನ ಶ್ರೀ

ಕಾಮಹರನ ಸತಿಯು ಸದಾ ನೇಮದಿಂದ ಭಜಿಸುವ ಶ್ರೀ

ಶಿವನು ಧನ್ಯನಾದ ಮೌನಿ ಯುವತಿ ಪಾವನೆಯಾದಳು
ರವಿಯ ಸುತನು ಪದವಿ ಪಡೆದ ಧ್ರುವನು ದಿವಿಜನೆನಿಸಿದ ಶ್ರೀ

ಕರಿವರ ಪ್ರಹ್ಲಾದ ದ್ರೌಪದಿ ವರ ವಿಭೀಷಣರೆಲ್ಲರು
ಹರಿಯ ಸ್ಮರಣೆಮಾಡಿ ಸುಖ ಭರಿತರಾಗಲಿಲ್ಲವೆ ಶ್ರೀ

ಗಿರಿಜೆ ರಾಮಮಂತ್ರದಿಂದ ಪರಮ ಮಂಗಳೆಯಾದಳು
ವರದ ಗೋಪಾಲವಿಠಲ ನಾಮ ದುರಿತಕಾನನ ಪಾವಕ ಶ್ರೀ

## ೭೦ ಸುಳಾದಿ

### ಧ್ರುವತಾಳ

ಸೃಷ್ಟಿಗೊಡೆಯ ಕೇಳೆಂದೆಷ್ಟು ನಾ ತುತಿಸಲು
ದೃಷ್ಟಿಯಿಂದಲಿ ಎನ್ನ ಕಡೆಯು ನೋಡದವೊಲ್ಲೆ
ಅಷ್ಟಸೌಭಾಗ್ಯವೆಂಬೋದೆಷ್ಟು ಮುದವೋ ನಿನಗೆ
ಘಟ್ಯಾಗಿ ನೀನಲ್ಲದನ್ಯರಿಲ್ಲವೆಂದರೆ
ನೊಟ್ಟದಿರುಹಿ ಮೊಗವಟ್ಟವೇರುತಲಿದೆ
ಎಷ್ಟಿಲ್ಲವೆಂದು ಕಣ್ಣಬಿಟ್ಟರಂಜುವನಲ್ಲ
ಘಟ್ಟಿ ಭಕುತಿ ಪಾಶದಿ ಕಟ್ಟಿ ಎನ್ನುದರದೊಳು
ಇಟ್ಟುಕೊಂಬೆನೊ ಪ ಜಿಷ್ಣುಸಖನೆ ಕೃಷ್ಣ
ಭ್ರಷ್ಠನೆಂತೆಂದು ದೂರದೃಷ್ಟಲಿ ನೋಡಿದರೆ
ಬಿಟ್ಟುಕೊಡೋ ಭಕ್ತವತ್ಸಲನೆಂಬ ಬಿರುದು
ಅಷ್ಟುಸಂಪತ್ತು ಮತ್ತಷ್ಟು ಕೊಡು ಎಂದು
ಕಷ್ಟಬಡಿಸಿ ನಿನ್ನ ಕಾಡಿ ಬೇಡುವನಲ್ಲ
ಕಷ್ಟಸಂಸಾರವೆಂಬ ಸುಳಿಯೊಳಗೆ ಎನ್ನ
ಇಟ್ಟು ನೋಡೋದು ನಿನಗೆಷ್ಟು ಸುಖವೋ ಕಾಣೆ
ಮೆಟ್ಟಿತುಳಿಯೋ ಬೆನ್ನಟ್ಟಿ ಬಹದುರಿತವ
ಕುಟ್ಟಿ ಬಿಸಾಡೋ ಅರಿಷ್ಟಸಂಸಾರ ಬೇರ
ಸೃಷ್ಟ್ಯಾದ್ಯಷ್ಟಕರ್ತ ಗೋಪಾಲ ವಿಠಲರೇಯ
ಸ್ಪಷ್ಟರೂಪವತೋರೋ ಮುಟ್ಟಿ ಪೂಜಿಸಲು

### ಮಠ್ಯತಾಳ

ಭಕುತರಿಗಾಗಿ ನೀ ಜಗವ ಪುಟ್ಟಿಸಿದ್ದೆಯು
ಭಕುತರಿಗಾಗಿ ನೀ ಅವತಾರವ ಮಾಡಿದ್ದೆಯು
ಭಕುತರು ನಿನ್ನನು ಭಜಿಸದಿದ್ದರೆ ದೇವ
ಸಕಲ ಲೋಕರು ನಿನ್ನ ಅರುಯುವರೆಂತೊ

ಮುಕುತಿದಾಯಕ ಮೂಲದೈವನೆಂತೆಂಬೋದು
ಸಕಲ ಲೋಕಕೆ ಕರಿರಾಜ ತೋರಿಸಿದನು
ಉಕುತಿಗಳಿಂದಲಿ ತುತಿಸಲು ಬಾಹೋದು
ಪ್ರಕಟಮಾಡಿದಳೈಯ ಶಕುತಳು ದ್ರೌಪದಿ
ಸಕಲದಲ್ಲಿ ನೀನು ವ್ಯಾಪಕನೆಂಬುದು
ಭಕುತ ಪ್ರಹ್ಲಾದ ನಿರವ ತೋರಿಸಿದನು
ಭಕುತರಿಂದಲಿ ನೀನು, ಭಕುತರಾಧೀನ ದೇವ
ಭಕುತ ವತ್ಸಲ ನಮ್ಮ ಲಕುಮಿಯ ರಮಣನೆ
ವಿಬುನಪತಿ ನಮ್ಮ ಗೋಪಾಲ ವಿಠಲರೇಯ
ಭಕುತರಮುಂದೆ ನಿನ್ನ ಯುಕುತಿನಡೆಯುದೊ ೨

ತ್ರಿಪುಟತಾಳ

ಶೃಂಗಾರ ಗದ್ದಿಗೆ ಭಂಗಾರಾಭರಣವಿಟ್ಟು
ರಂಗ ಒಲಿಯೋ ಎಂದು ಅಂಗೀಕರಿಸಲರಿಯೆ
ಮಂಗಳಮೂರುತಿ ಮನವೆ ಕಳ್ಳಿಹ ಪೀಠ
ಗಂಗಾಜನಕನೆಂದೆನಿಸಿ ಕೊಂಬುದೆ ಸ್ನಾನ
ಅಂಗನೆ ದ್ರೌಪದಿ ಅಭಿಮಾನ ರಕ್ಷಕ
ಶೃಂಗಾರ ಬಿರುದು ವಸನಂಗಳು ನಿನಗೆ
ಅಂಗವೆ ಕೊರಡು ಶ್ರೀಗಂಧ ತೇಯ್ದುಡುವೆನೋ
ಕಂಗಳೆರಡು ದೀಪ ಕರ ಉಭಯ ಚಾಮರ
ಅಂಗದೊಳಿದ್ದಷ್ಟ ಕಮಲವೆ ಕುಸುಮವು
ಹಿಂಗದೆನ್ನಯ ಕಿಂಚಿತ್ಕೃತಿಯೆ ನೈವೇದ್ಯ
ರಂಗ ದಿನದಿನ ಮಾಡಿದ ಕರ್ಮವೆ ಕಪ್ಪ
ತುಂಗವಿಕ್ರಮ ಜಠರಾಗ್ನಿ ಆರತಿ ತು
ರಂಗವದನ ಸರ್ವಾಂಗ ಸಮರ್ಪಿಸಿ ಕ .
ರಂಗಳಮುಗಿವೆ ಎನ್ನಂತರಂಗದಿ ನಿಲ್ಲೊ
ಸ್ವಾಂಗ[illegible]ನಾಮ ಗೋಪಾಲ ವಿಠಲರೇಯ
ಸಂಗವಿ[illegible] ಎನ್ನ ಡಿಂಗರಿಗರೊಡನೆ ೩

ಅಟ್ಟತಾಳ

ಒಡೆಯ ನಿನಗೆ ಮೊರೆಯಿಡುತಲಿದ್ದರೆ ಎನ್ನ
ಕಡೆಗೆ ನೋಡಲೊಲ್ಲೆ ಬಡಿವಾರ ನಿನಗೆಷ್ಟೊ
ತಡೆಯದೆ ನಾನೊಂದು ನುಡಿಯ ನುಡಿವೆ ಸೈಯ
ಕಡುಗುಷ್ಟನಾಗುತ ಮಡುವಿನೊಳಗೆ ಸೇರು
ಬಿಡದೆ ಬೆಟ್ಟವಪೊತ್ತು ಕಡಲೊಳಗಿರೊ ನೀನು
ಅಡವಿ ಸೂಕರ ಜನ್ಮ ಬಿಡದೆ ಬರಲಿ ನಿನಗೆ
ಕೆಡಲಿ ನಿನ್ನರೂಪ ಕಡುಘೋರನಾಗೆಲೊ
ಒಡಲಿಗಿಲ್ಲದೆ ನೀನು ತಿರುಕೆಯನ್ನು ಬೇಡೊ
ಕೊಡಲಿಯ ಪಿಡಿದು ನೀ ಅಡವಿ ಸಂಚಾರನಾಗೊ
ಮಡದಿಯ ಕಳಕೊಂಡು ಜಡೆಯಧರಿಸೊ ನೀನು
ತುಡುಗು ದನಗಾವನೆಂದು ನುಡಿಯಲಿ ಜನವೆಲ್ಲ
ಉಡು ವಸ್ತ್ರವಿಲ್ಲದೆ ಬತ್ತಲಾಗಿ ನಿಲ್ಲೊ
ಕಡುವೇಗದಲಿ ನೀನು * ಕಲ್ಕಿರೂಪನಾಗೊ
ತಡೆಯದೆ ವರಗಳ ಕೊಡುವೆನೀನೆಂತೆಂದು
ನುಡಿದೆನೊ ನಿನ್ನಂಥ ತುಡುಗುಮಾತುಗಳ
ಕಡುದಯಾಸಾಗರ ಗೋಪಾಲ ವಿಠಲರೇಯ
ಹಿಡಿದು ಬಿಡೆನೊ ನಿನ್ನ ಬಡವರಾಧಾರಿ ೪

ಆದಿತಾಳ

ಈಪರಿನುಡಿದರೆ ಪಾಪವೆಂದರೆ ಹರಿನಿ
ಪಾಪವೆಲ್ಲೀದೊ ನಿನ್ನವ್ಯಾಪಾರ ಇಂಥಾದು
ಪಾಪದ ಕಡಲಿನ ಕೂಪದೊಳಗೆಬಿದ್ದು
ತಾಪಕ್ಕಾರದೆ ನಿನ್ನ ಕೋಪದಿಂದಲಿ ನುಡಿದೆ
ಪಾಪಿಯೆಂತೆಂದು ಎನ್ನ ಹೋಪನೂಕಲುಪತಿ
ತಾಪವನ್ನನೆಂಬ ಬಿರುದುಂಟೆ ಎಲೊ ದೇವ

* ತುರಗಾರೂಢನಾಗೊ (ಪಾ)

ಮೂಪರವಾಗಿದ್ದೆ ನಾನುಪಮ ಕ್ರೋಧದೊಳಗೆ
ರಾಪು ಮಾಡದೆ ದೋಷ ಉಫ್ ಎಂದು ಹಾರಿಸಿ
ಕುಪಥವತಪ್ಪಿಸಿ ಸುಪಥವ ತೋರಿಸೊ
ಶ್ರೀಪತಿಯೆನ್ನಮೇಲೆ ನೀ ಪ್ರೀತಿಯನ್ನೆ ಮಾಡೊ
ಅಪಾರನಾಮಗಳ ಲೇಪಿಸಿ ಜಿಹ್ವೆಗೆ
ಪಾಪಗಳನೆ ಕಳೆಯೊ ದ್ರೌಪದಿ ಮಾನದೊಡೆಯ
ಭಾಪುರೆ ನಮ್ಮ ಗೋಪಾಲ ವಿಠಲರೇಯ
ನೀಪರದೇವತೆಂದು ನಾ ಪಾದಪಿಡಿದೆ

ಜತೆ

ಎಂದಿಗಿದ್ದರು ನಿನ್ನ ಬಳಿಗೆ ಬಾಹೋದೆ ಸತ್ಯ
ಹಿಂದೆ ಮುಂದೆ ಕರೆಯೊ ಗೋಪಾಲವಿಠಲ

## ೬೧ ಸುಳಾದಿ

ಧ್ರುವತಾಳ

ನಿನ್ನ ಸತಿಯಳಾದ ಸಿರಿಯು ಪದವಿಯು ನೋಡೊ
ನಿನ್ನ ಮಗನಾದ ಅಜನಪದವಿಯು ನೋಡೊ
ನಿನ್ನ ಮೊಮ್ಮಗನಾದ ಹರನ ಪದವಿಯು ನೋಡೊ
ನಿನ್ನ ಸೇವಕರೊಳು ಇಂದ್ರನ ಭಾಗ್ಯವ ನೋಡೊ
ನಿನ್ನ ಮಗಳು ಭಾಗೀರಥಿಯು ಭಾಗ್ಯವ ನೋಡೊ
ನಿನ್ನ ಭಕ್ತರಾದ ಗಂಧರ್ವರ ಭಾಗ್ಯವ ನೋಡೊ
ನಿನ್ನಿಂದವರನೆಲ್ಲ ಸೃಷ್ಟಿಸಲ್ಪಟ್ಟಿತು
ಎನ್ನನು ನೀನೆ ಹರಿ ಸೃಷ್ಟಿಯ ಮಾಡಲಿಲ್ಲೆ
ತನ್ನ ಮಕ್ಕಳು ತಾಯಿ ಅನಂತ ವಿದ್ದರನ್ನು
ಮನ್ನಿಸಿ ಒಬ್ಬರನ್ನು ಮುನ್ನಿಸದಲಿಪ್ಪಳೆ
ಇನ್ನು ಇವರು ಎಲ್ಲ ಪವಿತ್ರರೊ ನಿನಗೆ
ಮುನ್ನ ನಾನೇನು ನಿನಗೀಯದೆ ಪೋದೆ ರಂಗ

ಮನ್ನಿಸುವರು ನೀ ಮನ್ನಿಸಿದರವರು
ಕಣ್ಣೆಲಿ ನೋಡರು ನೀ ಕರುಣಿಸದಿರಲಿನ್ನು
ಘನ್ನ ಘನ್ನ ಸೇವೆಯಿವರಿಗುಂಟಾದರಿನ್ನು
ಮುನ್ನ ಇವರ ಉಚ್ಛಿಷ್ಟವಾದರು ಎನಗೆ
ಇನ್ನಿತಾದರು ಕಾರಣವಿಲ್ಲವೇನೊ
ನಿನ್ನ ಬೇಡುವಸಥೆ ಎಲ್ಲಿಂದ ಬಂತು ಎಂಬ್ಯ
ನಿನ್ನವರು ಕೊಟ್ಟಂಥ ಫಲವು ಎನಗೆ ಇದ್ದು
ಹಣ್ಣುವುಂಟಾದ ವೃಕ್ಷ ಹಂಬಲಿಸೋರು ಜನರು
ನಿನ್ನಲ್ಲಿ ಇಹೋದಯ್ಯ ಏನೆ ಬಲ್ಲಿಯೊ ದೇವ
ಘನ್ನ ಮಹಿಮ ಚೆಲುವ ಗೋಪಾಲವಿಠಲ
ನಿನ್ನಂತೆ ಸಾಕುವರಿನ್ನೊಬ್ಬರಿಲ್ಲ ದೇವ ೧

ಮಠ್ಯತಾಳ

ಧರೆಯೊಳಗಿಪ್ಪಂಥ ಪರಿಪರಿ ಕಮಲಗಳು
ಅರಳುವುದಕೆ ಇನ್ನು ಮರಳೊಂದು ರವಿಯುಂಟೆ
ವರುಷ ಕಾಲಗಳಲ್ಲಿ ಸುರಿಸುವ ಮೇಘಗಳು
ಪರಿಪಂಗಾಗ್ರಮುಕ್ಕ ಪರಿಪರಿಬೇರುಂಟೆ
ಎರಡೇಳು ಲೋಕಕ್ಕೆ ಧೊರೆ ನೀನಲ್ಲದೆ
ಮರಳಿ ಇನ್ನೊಂದು ದೈವರ ನಾಕಾಣೆ
ಕರುಣಾಕರ ರಂಗ ಗೋಪಾಲವಿಠಲ
ಮರೆಹೊಕ್ಕನು ಕಾಯೆ ಬಿರುದುಳ್ಳ ದೇವ ೨

ತ್ರಿಪುಟತಾಳ

ಪಿಡಿಯದೆ ಎನ್ನ ಕರವ ಸಡಿಲ ಬಿಟ್ಟರೆ ಇನ್ನು
ಪೊಡವಿಯೊಳಗೆ ನಿನ್ನ ಒಬ್ಬರು ನೆಚ್ಚರು
ಮಡದಿ ಪತಿಯರುಕೂಡಿ ಪಡೆದು ಒಂದು ಶಿಶುವ
ಬಿಡಿದಾಡಿದೋಪಾದಿ ನಿನಗೆ ಎನಗೆ ನ್ಯಾಯ

ಕೆಡವ್ಯಾಟ ಬಿದ್ದದೆ ಬಿಡಿಸುವರಿಲ್ಲವೊ
ಬಿಡೆನೊನಿನ್ನ ಪಾದ ಎಂದೆಂದಿಗೆ
ಪೊಡವಿಯೊಳಗೆ ನಿನಗೆ ಸಂಯಾರಿಲ್ಲವೊ ದೇವ
ದೃಢವಾಗಿ ನೀನಲ್ಲದೆನಗಿನ್ನು ಗತಿಯಿಲ್ಲ
ಬಿಡದೆ ಎನ್ನಲಿ ಪಡೆದಂಥ ಸುತರನ್ನು
ಕೊಡುವೆ ನಿನಗೆ ಕೃಷ್ಣ ತಡೆಯದಲೆ ಇನ್ನು
ತುಡುಗುತನವ ಬಿಡಿಸು ಕಡಿಸದೆ ಎನ್ನ ಕಂಡ
ಕಷ್ಟ ವಿಷಯಗಳಿಗೆ ಎರಗಿಸದೆ
ಬಡವನಾನೆಂದು ಕಡೆಗಣ್ಣಿಂದ ನೋಡಲು
ಬಡವನಾನಲ್ಲ ನಿನ್ನ ಒಡತಿಗೆ ಪಿಡಿತೊತ್ತು
ಕಡಲಶಯನ ರಂಗ ಗೋಪಾಲವಿಠಲ
ಕಡು ದೀನರಕ್ಷಕ ನಮೋ ನಮೋ ನಮೋ

ಅಟತಾಳ

ಊರ ಔತಣಹೇಳಿ ಸಾರಿ ಡಂಗುರಹೊಯಿಸಿ
ಧೀರರಾಯರಿಗೆಲ್ಲ ಸಾರಪಡ್ರಸವಿತ್ತು
ತೀರ ತೀರದಿ ಇನ್ನು ಬೀರುತ ಊಟವಾಗ
ದ್ವಾರದಲೊಬ್ಬ ಮಾಧವ ಕರೆದವ ಬಂದು
ಆರಿಪಾರಿದರಿನ್ನು ಹಾರಿಸ್ಯಾಕುವರುಂಟೆ
ಕಾರುಣ್ಯಮೂರುತಿ ಕರುಣದಿಂದಲ ನೋಡೋ
ನೀರೊಳಗಿನ ಮತ್ಸ್ಯ ನೀರೆ ಬಯಸುವವು
ಘೋರ ಅರಣ್ಯಕೆ ಹಾರೈಸಬಲ್ಲವೆ
ಮಾರಜನಕ ನಮ್ಮ ಗೋಪಾಲವಿಠಲ
ಸೇರಿಸೊ ನಿನ್ನನು ಸೇರಿದವರ ಬಳಿಯ

ಆದಿತಾಳ

ಒಂದೆ ಬೇಡುವೆ ನಿನ್ನ ಒಂದೆ ದೇವನೆ ಕೇಳೊ
ಒಂದೆ ಮನವಕೊಡು ವಂದಿಪೆ ನಿನ್ನನು

ಹಿಂದನಂತ ಜನ್ಮದಿ ಮಾಡಿದ ದೋಷ
ಮುಂದಾಗುವ ಅನಂತ ದೋಷಗಳಿಗೆ
ಒಂದುಬಾರಿ ನಿನ್ನ ಸ್ಮರಣೆಯು ಮರೆಸದೆ
ಹೊಂದವಿ ಇತ್ತು ಆನಂದವಿ ಪೊರೆಯೊ
ಬಂದೆನೊ ನಾನಿತ್ತ ಬರಬಾರದೆ ಇನ್ನು
ನೊಂದೆನೊ ನಾಬಳುಬಂಧನಕ್ಕೆ ಸಿಲುಕಿ
ತಂದುದಕೆ ಇನ್ನು ತಂದ ಕಾರ್ಯವಮಾಡಿಸಿ
ಪೊಂದಿಸು ನಿನ್ನ ಅರವಿಂದ ಚರಣದಲ್ಲಿ
ಕಂದರ್ಪನ್ನೈಯ ಗೋಪಾಲವಿಠಲ ಇನ್ನು
ಎಂದೆಂದಿಗೆ ಎನಗೆ ನೀನೆಗತಿಯೊ ೨೪

ಜತೆ

ನಿನ್ನದಾಸರ ದ್ವಾರವನು ಕಾಯ್ವರ ಮನೆ
ಕನ್ನಿ ಎಂದೆನಿಸೆನ್ನ ಗೋಪಾಲವಿಠಲ

## ೬೨ ಸುಳಾದಿ

### ಧ್ರುವತಾಳ

ಧರೆಯೊಳಗೆ ನಮ್ಮ ಗುರು ರಾಘವೇಂದ್ರರಿನ್ನು
ಇರುತಿಪ್ಪವಿವರವ ಅರಿತಷ್ಟು ವರ್ಣಿಸುವೆ
ಸ್ಥಿರವಾಗಿ ಮಂತ್ರಾಲಯ ಪುರತುಂಗಾತೀರದಿ
ಹರಿಭಕ್ತ ಪ್ರಹ್ಲಾದ ವರ ಯಾಗ ಇಲ್ಲಿಮಾಡಿ
ಸುರರಿಗಮೃತ ಉಣಿಸಿ ಪರಿಪರಿ ಕ್ರಿಯೆಮಾಡಿ
ಪರಿಶುದ್ಧ ಇದನೆಂದು ಅರಿತು ಈಸ್ಥಳದಲ್ಲಿ
ಗುರುರಾಘವೇಂದ್ರರಾಯ ಶರೀರ ಪೋಗಾಡಿಸಿಲ್ಲಿ
ಪರಲೋಕ ಸಾಧನ ಪರಿಪೂರ್ತಿಮಾಡಿಕೊಂಡು
ಸಿರಿಕೃಷ್ಣ ಚರಣಕ್ಕೆರಗಿ ಸಂತೋಷದಲ್ಲಿ
ಧರೆಯಮೇಲಿದ್ದ ಜನರ ಪೊರೆಯ ಬೇಕೆಂದೆನಲು

ಹರಿ ನೋಡಿದನಿವರ ಪರಮಪಯಾಳುತನವ
ಗುರುವಂತರ್ಯಾಮಿಯಾಗಿ ವರವ ನೀಡಲು ಜಗಕೆ
ನರಹರಿ ತಾನೆನಿಂದು ನಿರುತ ಪೂಜೆಯುಗೊಂಡು
ಸಿರಿಯುಳ್ಳ ಕೀರುತಿಯು ಸುರಪಾಲಕ ಚಕ್ರ
ಧರನಾರೇಯಣ ತಾನಿವರ ಸನ್ನಿಧಾನನಾಗಿ
ವಂಗೆ ಫಲತಂದೀವ ಇಹಪರದಲಿ ಇನ್ನು
ಕರುಣಾಕರ ರಂಗ ಗೋಪಾಲವಿಠಲ ತನ್ನ
ಶರಣರ ಪೊರೆವಂಥ ಚರಿಯು ಪರಿಪರಿವುಂಟು

ಮಠ್ಯತಾಳ

ನರಹರಿ ಕೃಷ್ಣರಾಮ ಸಿರಿ ವೇದವ್ಯಾಸ
ಎರಡೆರಡು ನಾಲಕು ಹರಿಮೂರುತಿಗಳು
ಪರಿವಾರ ಸಹಿತಾಗಿ ಸಿರಿಸಹಿತನಿಂದು
ಸುರಗುರು ಮಧ್ವಾಚಾರ್ಯರೆ ಮೊದಲಾಗಿ
ತರುವಾಯದಲ್ಲಿನ್ನು ತಾರತಮ್ಯನುಸಾರ
ಪರಿಪರಿಯತಿಗಳು ಇರುತಿಪ್ಪವರಲ್ಲಿ
ಹರುಷದಿಂದಲಿ ವೇದವೊರೆದು ಶಾಸ್ತ್ರಗಳಿನ್ನು
ಪರಿಪರಿ ಪುರಾಣ ಭಾರತಾಗಮದಲ್ಲಿ
ಸರಿಸರಿ ಬಂದಂತೆ ಸರಿಗಮವೆನುತಲಿ
ಭರದಿಂದಲಿ ಕುಣಿದು ಭಕುತಿಯಿಂದಲಿ ಇನ್ನು
ಹರಿಯನ್ನು ಪೂಜಿಸುತ ಇರುಳುಹಗಲು ಬಿಡದೆ
ಪರಿಪರಿ ವಿವರವ ಪರಿಪರಿಕೇಳ್ವರು
ಗರುಡವಾಹನ ರಂಗ ಗೋಪಾಲವಿಠಲ ತನ್ನ
ಶರಣರ ಪಾಲಿಸುತಿರುತಿಪ್ಪನಿಲ್ಲಿ

ತ್ರಿಪುಟತಾಳ

ನರಹರಿ ರೂಪನಾಗಿ ವಾಸವಾಗಿ ಇಲ್ಲಿ
ದುರಿತದುಷ್ಕೃತ ಬ್ರಹ್ಮತ್ಯಗಳ ದೂರೋಡಿಸುವ

ಸಿರಿ ರಾಮನಾಗಿ ವಾಸವಾಗಿ ಇಲ್ಲಿ ಪರಿ
ಪರಿಯಿಂದ ದೇಶಾಂತರ ಅನ್ನ ಕಳಕೊಂಡು
ನರರಲ್ಲಿ ಬಂದರೆ ಸ್ಥಿರಪಟ್ಟ ಗಟ್ಟುವ
ಸಿರಿಕೃಷ್ಣನಾಗಿ ವಾಸವಾಗಿ ಇಲ್ಲಿ
ಪರಿಪರಿಯಲಿ ಬಂದ ಪರಮಾತುರರಿಗೆ
ವರವೀವ ಪುತ್ರೋತ್ಸವ ಮದುವೆ ಮುಂಜಿ
ಹರಕೆಗಳ ಕೈಕೊಂಡು ಹರುಷ ಬಡಿಸುವ
ವರ ವೇದವ್ಯಾಸನಾಗಿ ವಾಸವಾಗಿ ಇಲ್ಲಿ
ಭರದಿಂದ ಬಂದ ದುರ್ವಾದಿಗಳನೆಲ್ಲ
ದೂರಓಡಿಸಿ ಮುರಿದು ಅವರ ಕುಶಾಸ್ತ್ರವ
ಹಂಸನ್ಯೋತ್ತಮನಿಂದು ಇರುವನಿಲ್ಲಿ ತೋರಿ
ಶರಣಜನಕೆ ಇನ್ನುವರ ಜ್ಞಾನ ಸುಧೆಯು
ಕರೆದುಕೊಡುತಲಿ ಇರುತಿಪ್ಪವನಿಲ್ಲಿ
ಸುರವಂದಿತಪಾದ ಗೋಪಾಲವಿಠ್ಠಲ
ಪರಿಪರಿಯಿಂದ ಪಾಲಿಗ ಕೈ ಕೊಳುತಿಪ್ಪ ೩

ಅಟತಾಳ

ರಾಘವೇಂದ್ರನೆಂಬ ರೂಪತಾನೆಯಾಗಿ
ರಾಘವೇಂದ್ರನೆಂಬ ನಾಮ ಇಡಿಸಿಕೊಂಡು
ರಾಘವೇಂದ್ರರಿನ್ನು ಮಾಡಿದಂಥ ಪುಣ್ಯ
ಭೋಗವರಿತು ತನ್ನ ಭಾಗವತರ ಕೀರ್ತಿ
ಸಾಗಿಸಿ ಸಲಹಲು ಜಗದೊಳಗೆಲ್ಲ
ಮೋಘಸೂರ್ಯನಂತೆ ಅಮೋಘಕೀರುತಿಯನ್ನು
ರಾಘವ ಇವರಿಗೆ ರಾಜ್ಯವತಂದೀವ
ರಾಘವೇಂದ್ರ ಮೂರ್ತಿಗೋಪಾಲವಿಠಲ
ಭಾಗವತರಲ್ಲಿ ಬಹು ಪೂಜೆಯನುಗೊಂಬ ೪

ಆದಿತಾಳ

ದಿನದಿನಕಿಲ್ಲಿ ನೂತನ ಪೂಜೆಗಳಾಗುವವು
ದಿನದಿನಕಿಲ್ಲಿ ನೂತನ ಉತ್ಸವವಾಗುವವು
ದಿನದಿನಕಿಲ್ಲಿ ನೂತನ ವಾರ್ತೆಗಳಾಗುವವು
ಜನರ ಸಂದಣಿ ಪ್ರತಿದಿನ ವಿಪ್ರಭೋಜನ
ಜನರ ಕೈಯಿಂದ ಪ್ರತಿಜನರೀಪ್ಸಿತ ತುಂಬುವಳು
ಜನುಮಸಫಲ ತಮ್ಮ ಜನನವನೀಗುವರು
ದಿನಸಪ್ತ ಶತುವರುಷದಿನ ಪರಿಯಂತರ
ದಿನಕರ ಶತತೇಜ ಜನನಾಥ ತಾನಿಲ್ಲಿ
ಅನುವಾಗಿ ತಾನಿಂದು ಜನರ ಪಾಲಿಪುದ
ಕ್ಕನುಮಾನ ಸಲ್ಲದು ಗುಣಗಣಪರಿ
ಪೂರ್ಣಗೋಪಾಲವಿಠಲ ಆಣೋ
ರಣೀಯ ಎಂಬುವಗೆ ಎಣೆಯಾರೊ ಜಗದೊಳಗೆ ೨೧

ಜತೆ

ಮಂತ್ರಸಿದ್ಧಿಯಕ್ಷೇತ್ರ ಇದನೋಡಿ ಕೋವಿದರು
ಮಂತ್ರ ಪ್ರತಿಪಾದ್ಯ ಗೋಪಾಲವಿಠಲನಿಂದ

## * ತತ್ವಸಾರ

ರಾಗ ಶಂಕರಾಭರಣ ಆದಿತಾಳ

ಜಗತನದೊಳು ಸುಖವಿಲ್ಲ, ಇದ
ಒಲ್ಲೆನೆಂದರೆ ನೀ ಬಿಡೆಯಿಲ್ಲ ಪ.
ಜಗದೊಳು ಹಗರಣ ಮಿಗಿಲಾಯಿತು ಪ
ನ್ನಗನಗ ನಗರ ನಿವಾಸ ಅ.

---

* ಈ ಪದವು ಗೂಢವಾದ ತತ್ವ ರಹಸ್ಯಗಳಿಂದ ಕೂಡಿ, ಶಾಸ್ತ್ರಜ್ಞರಲ್ಲದ ಸಾಮಾನ್ಯ ಪಾಠಕರಿಗೆ ಸುಲಭವಾಗಿ ಬೋಧವಾಗಲಾರದಾದುದರಿಂದ,

ಮೂರು ಬಣ್ಣಿಗೆಯ ಮನೆಗೆ ಮೂರೆರಡು ಭೂತಗಳು
ಮೂರು ನಾಲ್ಕು ಪ್ರಾಕಾರಕ್ಕೆ ಮೂರಾರು ಛಿದ್ರಗಳು
ಮೂರು ಅವಸ್ಥೆಯು ದಿನಕೆ ಮೂರು ನೂರಾರು ಹತ್ತರಲಿ
ಮೂರುವಿಧದನ್ನದಿಂದ ಮೂರುತಾಪಕ್ಕಾರೆ ೧

---

ಮಹನೀಯರಾದ ಪೂರ್ವಿಕ ದಾಸವರ್ಯರಿಂದ ವಿರಚಿತವಾಗಿ, ನಮಗೆ ದೊರೆತಂತೆ-ಅದರ ಅರ್ಥವನ್ನೂ ಕ್ರಮವಾಗಿ ಈ ಕೆಳಗೆ ಕೊಡಲಾಗಿದೆ.

ಪಲ್ಲವಿ — ಈ ಸಂಸಾರದಲ್ಲಿ ಲೇಶಮಾತ್ರವೂ ಸುಖವಿಲ್ಲ. ಇದರಲ್ಲಿದ್ದು ತೊಳಲುವುದು ನನ್ನಿಂದಾಗದು ಎಂದರೆ ಪ್ರಾರಬ್ಧ ಕರ್ಮವನ್ನು ಅನುಭವಿಸಿಯೇ ತೀರಬೇಕೆಂಬುದು ನಿನ್ನ ನಿಯಮವಾಗಿದೆ. ಈ ಪ್ರಪಂಚದಲ್ಲಿ ಕಷ್ಟವು ಅತಿಶಯವಾಗಿದೆ. ಶೇಷಾಚಲ ವಾಸಿಯಾದ-ಅರ್ಥಾತ್ ವೈಕುಂಠ ನಿಲಯನಾದ ಶ್ರೀ ಶ್ರೀನಿವಾಸನೇ ನನ್ನನ್ನು (ಎಂದರೆ ಜೀವ ವರ್ಗವನ್ನು) ಕರುಣದಿಂದ ಕಾಪಾಡು.

೧ ಸಂಸಾರವಾಡಲು ಸಾಧನವಾಗಿ ಮುಖ್ಯವಾಗಿ ಶರೀರವಿರಬೇಕು. ಆ ಶರೀರವು ಹೇಗೆ ಇದೆ ಎಂದರೆ, ಮೂರು ಬಣ್ಣಿಗೆಯ ಮನೆ=ಬಿಳುಪು (ಸತ್ವ) ಕೆಂಪು (ರಜ) ಕಪ್ಪು (ತಮ) ಈ ಮೂರುಗುಣಗಳಿಂದ ಕೂಡಿ, ಮೂರು ಎರಡು ಭೂತಗಳು=ಪೃಥ್ವಿ, ಅಪ್ಪು, ತೇಜ ವಾಯು ಆಕಾಶವೆಂಬ ಪಂಚಭೂತಗಳಿಂದ ನಿರ್ಮಿಸಲ್ಪಟ್ಟಿದೆ. ಈ ದೇಹವೆಂಬ ಪಟ್ಟಣಕ್ಕೆ ಮೂರು-ನಾಲ್ಕು ಪ್ರಾಕಾರ=ತ್ವಕ್ಕು, ಚರ್ಮ, ಮಾಂಸ, ರುಧಿರ, ಮೇದಸ್ಸು, ಮಜ್ಜ, ಅಸ್ಥಿ ಎಂಬೀ ಏಳುವಿಧ ಧಾತುಗಳೆಂಬ ಪ್ರಾಕಾರಗಳಿವೆ. ಈ ಪಟ್ಟಣದಲ್ಲಿ ಬಾಗಿಲುಗಳಂತೆ ಮೂರಾರು ಛಿದ್ರಗಳು ಎಂದರೆ ಒಂಬತ್ತು ಕಿಂಡಿಗಳಿವೆ. ಅವು ಯಾವುವೆಂದರೆ ಎರಡು ಕಣ್ಣುಗಳು, ಎರಡು ಮೂಗಿನ ಹೊಳ್ಳೆಗಳು, ಒಂದು ಬಾಯಿ, ಎರಡು ಕಿವಿಗಳು, ಒಂದು ಗುದ, ಒಂದು ಉಪಸ್ಥ ಹೀಗೆ ಒಂಬತ್ತು ಬಾಗಿಲುಗಳು. ಈ ದೇಹಕ್ಕೆ ದಿನಒಂದಕ್ಕೆ ಮೂರು ಅವಸ್ಥೆಗಳು. ಜಾಗ್ರತ್ಸ್ವಪ್ನ ಸುಷುಪ್ತಿ ಎಂಬಿವು ನಡೆಯುತ್ತಿರುತ್ತವೆ. ಹೀಗೆ ಮೂರು ನೂರಾರ್ಹತ್ತುಗಳಲ್ಲಿ ಎಂದರೆ ಮುನ್ನೂರು

ಐದುಮಂದಿ ಭಾವನವರು ಐದುಮೈದುನರು ಕೂಡಿ
ಐದು ಪರಿಯಾದನಾಗಿ ಮಾವನೈದು ಕತ್ತಲೆಕೋಣೆ
ಗೈದುವಂತೆ ಮಾಡುವರು ಐದುತಂದು ಬೆಚ್ಚಿಸುವರು
ಐದನೆ ಬೊಕ್ಕಸದಮನೆ ಯೆಲ್ಲಿದೆಯೊ ನಾಕಾಣೆ ೨

---

ಅರವತ್ತು ದಿವಸಗಳಲ್ಲಿ ಅರ್ಥಾತ್ ಪ್ರತಿದಿನವೂ ಮೂರುವಿಧ ಅನ್ನವನ್ನು ತಿನ್ನಬೇಕು. ಎಂದರೆ ಸಂಚಿತ ಆಗಾಮಿ ಪ್ರಾರಬ್ಧವೆಂಬ ಮೂರು ವಿಧ ಕರ್ಮಗಳ ಫಲವನ್ನು ಅನುಭವಿಸಬೇಕು. ಹೀಗೆ ಅನುಭವಿಸುವುದರಲ್ಲಿ ಮೂರುತಾಪಗಳು ನನ್ನನ್ನು ಬಾಧಿಸುತ್ತವೆ. ಮೂರುತಾಪಗಳು=ಆಧ್ಯಾತ್ಮಿಕ ಅಧಿದೈವಿಕ ಆದಿಭೌತಿಕ, (ತನ್ನಿಂದ, ಪರರಿಂದ, ದೈವದಿಂದ) ಈ ತಾಪಗಳನ್ನು ಸಹಿಸಲಾರೆನು ಸ್ವಾಮಿಯೇ ಕಾಪಾಡು.

೨ ನನ್ನ ಈ ಸಂಸಾರದಲ್ಲಿ, ಐದುಮಂದಿ ಭಾವನವರು=ಶ್ರವಣ, ನಯನ, ಘ್ರಾಣ, ತ್ವಕ್ಕು, ರಸನ ಎಂಬ ಪಂಚ ಜ್ಞಾನೇಂದ್ರಿಯಗಳು, (ಜ್ಞಾನೇಂದ್ರಿಯಗಳು ಶ್ರೇಷ್ಠವಾದುವುಗಳಾದ್ದರಿಂದ ಭಾವನವರು ಎಂದರು) ಐದು ಮೈದುನರು=ವಾಕು, ಪಾಣಿ, ಪಾದ, ಪಾಯು ಉಪಸ್ಥ ಎಂಬ ಪಂಚ ಕರ್ಮೇಂದ್ರಿಯಗಳು. ಐದು ಪರಿಯಾದ ಮಾವನು=ಮನಸ್ಸು, ಬುದ್ಧಿ, ಚಿತ್ತ, ಅಹಂಕಾರ ಚೇತನವೆಂಬ ಪಂಚವೃತ್ತಿಯಿಂದ ಕೂಡಿರುವ ಮನಸ್ಸೆಂಬ ಮಾವನೂ ಇವರೆಲ್ಲರೂ ಸೇರಿ ನನ್ನನ್ನು ಪರಮಪುರುಷನಾದ ನಿನ್ನ ಬಳಿ ಸೇರಲೀಯದೆ ಐದು ಕತ್ತಲೆ ಕೋಣೆಗೆ ಐದಿಸುವರು=ತಾಮಿಸ್ರ, ಅಂಧತಾಮಿಸ್ರ, ಮೋಹ, ಮಹಾ ಮೋಹ, ನಿಧನವೆಂಬ ಅವಿದ್ಯಾ ಪಂಚಕದ ಕತ್ತಲೆ ಕೋಣೆಗೆ, ಬಲವಂತದಿಂದ ಒಯ್ಯುತ್ತಾರೆ. ಹೋಗುವುದಿಲ್ಲವೆಂದು ಮುಷ್ಕರ ಮಾಡಿದರೆ ಬೆಚ್ಚಿಸುವರು.=ಶಬ್ದ ಸ್ಪರ್ಶ ರೂಪ ರಸ ಗಂಧವೆಂಬ (ತನ್ಮಾತ್ರೆಗಳೆಂಬ) ಉರಿಯುವ ಕೊಳ್ಳಿಯನ್ನು ತಂದು ಬೆಚ್ಚಿಸುವರು. (ಎಂದರೆ ವಿಷಯಗಳಲ್ಲಿ ಮಗ್ನನನ್ನಾಗಿ ಮಾಡಿ ಮುಂದಿನಗತಿ ಯೇನೆಂಬ ದಿಗಿಲನ್ನು ಹುಟ್ಟಿಸುತ್ತಾರೆ. ಸುಖವಾಗಿರೋಣವೆಂದರೆ ಅದಕ್ಕೆ ಸಾಧಕವಾದ ಬೊಕ್ಕಸದ ಮನೆಯನ್ನು ಹೊಗಲೀಯರು. ಬೊಕ್ಕಸಗಳು ಐದು. ಅವು ಯಾವುವೆಂದರೆ, ಅನ್ನಮಯ, ಪ್ರಾಣಮಯ

ಆರಾರು ಎರಡುಸಾವಿರ ದಾರಿಯಲಿ ಹೋಗಿ ಬರುವರು
ಆರು ಮೂರು ಮೂರು ಸಾವಿರದಾರು ನೂರು ನಿತ್ಯದಿ
ಆರು ನಾಲ್ಕು ಮಂದಿ ಹಿರಿಯ ಪಾರುಪತ್ಯಗಾರರಿದಕೆ
ಆರು ಎರಡು ವಿಧದಲೆನ್ನ ಗಾರು ಮಾಡುತಿಪ್ಪರೋ ೩

---

ಮನೋಮಯ, ವಿಜ್ಞಾನಮಯ, ಆನಂದಮಯವೆಂಬ ಐದು ಕೋಶಗಳು ಅವುಗಳಲ್ಲಿ ಕಡೆಯದಾದ ಆನಂದವೆಂಬುದು ಎಲ್ಲಿದೆಯೋ ನಾನು ಕಾಣೆ. ಪರಮಾತ್ಮನೇ ಕಾಪಾಡು.

೩ ಈ ದೇಹವೆಂಬ ಪಟ್ಟಣಕ್ಕೆ ಆರಾರು ಎರಡು ಸಾವಿರ ದಾರಿಗಳು =೬×೬=೩೬, ೩೬×೨=೭೨. ಹೀಗೆ ಎಪ್ಪತ್ತೆರಡು ಸಾವಿರ ನಾಡಿಗಳೆಂಬ ದಾರಿಯಲ್ಲಿ, ವಾಯುದೇವರು ಹೋಗಿಬರುತ್ತಾ ಎಂದರೆ ಉಚ್ಛ್ವಾಸ ನಿಶ್ವಾಸಗಳ ಮೂಲಕ ದಿನ ಒಂದಕ್ಕೆ, ಆರು ಮೂರು ಸಾವಿರದಾರುನೂರು=೬×೩=೧೮, ೧೮+೩=೨೧ ಹೀಗೆ ಇಪ್ಪತ್ತೊಂದು ಸಾವಿರದ ಆರುನೂರು ಶ್ವಾಸ ಜಪಗಳನ್ನು ಮಾಡುತ್ತಿರುತ್ತಾರೆ. ಆದರಿಂದ ನನ್ನ ಮುಂದಿನ ಗತಿಗೆ ಸಾಧನವಾಗುವಂತೆ ಮಾಡಬೇಕೆಂದು ಪ್ರಾರ್ಥಿಸುತ್ತೇನೆ. ಹಾಗಲ್ಲದೆ ಈ ಮುಖ್ಯಪ್ರಾಣದೇವರಿಂದ ಆಜ್ಞಪ್ತರಾದ ಆರು ನಾಲ್ಕುಮಂದಿ ಎಂದರೆ ೬×೪=೨೪ಮಂದಿ ಪಾರುಪತ್ಯೇಗಾರರು ಅವರು ಯಾರೆಂದರೆ,

೫ ಭೂತಗಳು (ಪೃಥ್ವಿ, ಅಪ್ಪು, ತೇಜ, ವಾಯು, ಆಕಾಶ).
೫ ತನ್ಮಾತ್ರೆಗಳು (ಗಂಧ, ರಸ, ರೂಪ, ಸ್ಪರ್ಶ, ಶಬ್ದ).
೫ ಕರ್ಮೇಂದ್ರಿಯಗಳು (ವಾಕ್ಕು, ಪಾಣಿ, ಪಾದ, ಪಾಯು, ಉಪಸ್ಥ).
೫ ಜ್ಞಾನೇಂದ್ರಿಯಗಳು (ಶ್ರವಣ, ನಯನ, ಘ್ರಾಣ, ರಸನ, ತ್ವಕ್ಕು).

| | |
|---|---|
| ೧ ಮನಸ್ಸು | ಒಟ್ಟು ೨೪. ಹೀಗೆ ಇಪ್ಪತ್ನಾಲ್ಕು ಮಂದಿ (ತತ್ವಗ |
| ೧ ಬುದ್ಧಿ | ಳು-ಜಡಗಳು, ಇವುಗಳಿಗೆ ಅಭಿಮಾನಿ ದೇವತೆಗಳು) |
| ೧ ಅಹಂಕಾರ | ನೇ ಆರು ಎರಡು ವಿಧವಿ=೬+೨=೮ ವಿಧವಾದ |
| ೧ ಚಿತ್ತ | ಮದದಿಂದ, ಎಂದರೆ, ಅನ್ನಮದ, ಅರ್ಥಮದ, ಅಹಂ |

ಒಬ್ಬ ಬೆಳಕುಮಾಡುವ ಮತ್ತೊಬ್ಬ ಕತ್ತಲೆಗೈದಿಸುವ
ಒಬ್ಬ ಎರಡೂಮಾಡುವ ಮೇಲೊಬ್ಬನಿಂತು ನೋಡುವ
ಒಬ್ಬ ಮೂವರ ಒಳಒಳಗೆ ಹಬ್ಬಿಕೊಂಡಿಪ್ಪವರಂತೆ
ಒಬ್ಬನ ಕಾಣದೆ ನಾ ತಬ್ಬಿಬ್ಬುಗೊಳಗಾದೆ ೪

---

ಕಾರಮದ, ವೈಭವಮದ, ಸಾಹಸಮದ, ಧಾತ್ರಿವಶಮದ, ಪ್ರಾಯಮದ, ಮೋಹಮದ ಇಂತು ತತ್ವಾಭಿಮಾನಿಗಳು ನನಗೆ ಈ ಎಂಟು ಮದಗಳನ್ನು ಹಚ್ಚಿ ಹಾಳುಮಾಡುತ್ತಾರೆ. ಆದುದರಿಂದ ನೀನು, ಮೇಲ್ವಿಚಾರಣೆಯನ್ನು ತೆಗೆದುಕೊಂಡು, ಅದರಿಂದ ನನಗೆ ಸತ್ಸಾಧನೆಯಾಗುವಂತೆ ಮಾಡಬೇಕೆಂದು ಬೇಡುತ್ತೇನೆ.

೪ ಈ ದೇಹದಲ್ಲಿ ಜೀವರ ಸಾಧನೆಗಾಗಿ ವಿಶ್ವಾದಿ ರೂಪಗಳಿಂದ ಪರಮಾತ ನು ಮಾಡುವ ವ್ಯಾಪಾರವನ್ನು ವರ್ಣಿಸುತ್ತಾರೆ.

ಒಬ್ಬ ಬೆಳಕು ಮಾಡುವನು=ವಿಶ್ವನಾಮಕ ಪರಮಾತ್ಮನು ದಕ್ಷಿಣಾಕ್ಷಿ ಸ್ಥಿತನಾಗಿ, ಬೆಳಕೆಂಬ ಜಾಗ್ರದಾವಸ್ಥೆಗೆ ಪ್ರೇರಕನಾಗಿದ್ದಾನೆ.

ಒಬ್ಬ ಕತ್ತಲೆ ಗೈದಿಸುವ=ಪ್ರಾಜ್ಞನಾಮಕ ಪರಮಾತ್ಮನು ಹೃದಯದಲ್ಲಿದ್ದು, ಜೀವನಿಗೆ ಕತ್ತಲೆಯೆಂಬ ಗಾಢ ನಿದ್ರೆಗೆ ಪ್ರೇರಕನಾಗಿದ್ದಾನೆ.

ಒಬ್ಬನು ಎರಡೂ ಮಾಡುವ=ತೈಜಸನಾಮಕ ಪರಮಾತ್ಮನು ಕಂಠಪ್ರದೇಶದಲ್ಲಿದ್ದು, ಎಚ್ಚರಿಕೆಯೂ ಅಲ್ಲದ ನಿದ್ರೆಯೂ ಅಲ್ಲದ ಸ್ವಪ್ನಾವಸ್ಥೆಗೆ ಪ್ರೇರಕನಾಗಿದ್ದಾನೆ.

ಮೇಲೊಬ್ಬ ನಿಂತು ನೋಡುವ=ತುರ್ಯನಾಮಕ ಪರಮಾತ್ಮನು ಶಿರಸ್ಸಿನ ಹನ್ನೆರಡು ಅಂಗುಲದಮೇಲೆ ಇದ್ದು ಆನಂದವನ್ನುಂಟುಮಾಡುತ್ತಾನೆ. ಆತನಿಗೇ ವಾಸುದೇವನೆಂದು ಹೆಸರು. ಆತನೇ ಶಿರಸ್ಸಿನಮೇಲೆ ಅಮೃತ ವೃಷ್ಟಿಯನ್ನು ಕರೆಯುವವನು. ಬಹಿರ್ಜಲದಲ್ಲಿ ಅವಗಾಹನ ಸ್ನಾನ ಮಾಡುವಾಗ, ಕರಸಂಪುಟವನ್ನು ಶಂಖಾಕಾರವಾಗಿ ಮಾಡಿ, ತುರ್ಯನಾಮಕ ವಾಸುದೇವನಿಗೆ ಮಾಡುವ ಅಭಿಷೇಕವೆಂದೂ ಆತನ ಪಾದ ತೀರ್ಥವೇ ತಮ್ಮ ಶಿರದಮೇಲೆ ಬಿದ್ದು ತೀರ್ಥಸ್ನಾನವಾಯಿತೆಂದೂ ಜ್ಞಾನಿಗಳು ತಿಳಿ

ಆರು ಹತ್ತರಮೂಲದಿ ಆರುಮುಂದಿ ಬಿಡದೆ ಎನ್ನ
ಘೋರ್ಯಿಸುವರೊ ಮರುಳೊಂದು ವಿಚಾರ ಮಾಡಲೀಸರೊ
ಆರು ಮೂರುವಿಧದ ಸೋಪಸ್ಕರ ಒಂದಾದರು ಇಲ್ಲ
ಆರೆ ಇಬ್ಬರು ಸವತೇರ ಹೋರಾಟವೇನೆಂಬೆ ೫

ಯುತ್ತಾರೆ. (ತುರಾಯಿ ಎಂದು ಮುಡಿದುಕೊಳ್ಳುತ್ತಾರಲ್ಲಾ ಅದೇ ಪುಷ್ಪವು ತುರ್ಯನಾಮಕ ಭಗವಂತನಿಗೆ ಸಮರ್ಪಣೆಯೆಂದು ತಿಳಿಯಬೇಕು. ತುರ್ಯಾಯ ಎಂದರೆ ತುರ್ಯನಾಮಕ ಪರಮಾತ್ಮನಿಗೆ ಎಂದು ಅರ್ಥಕೊಡುವ ಪದವನ್ನೇ ತುರಾಯಿ ಎಂದು ಗ್ರಾಮ್ಯ ಭಾಷೆಯಲ್ಲಿ ಹೇಳುತ್ತಾರೆ.

ಒಬ್ಬ ಮೂವರೊಳಗೊಳಗೆ ಹಬ್ಬಿಕೊಂಡಿಪ್ಪನವರಂತೆ=ಒಬ್ಬನಾದ ಪರಮಾತ್ಮನು ಮೂವರಾದ ಆತ್ಮ ಅಂತರಾತ್ಮ ಜ್ಞಾನಾತ್ಮ ರೂಪಗಳಲ್ಲಿ ಒಳಗೊಳಗೆ ಹಬ್ಬಿಕೊಂಡಿರುವನು, ಎಂದರೆ ವ್ಯಾಪಿಸಿರುತ್ತಾನೆ. ಒಬ್ಬನ ಕಾಣದೆ=ಹೀಗೆ ವಿಶ್ವತೈಜಸ ಪ್ರಾಜ್ಞ ತುರ್ಯ ಆತ್ಮ ಅಂತರಾತ್ಮ ಜ್ಞಾನಾತ್ಮ ಪರಮಾತ್ಮನೆಂಬ ಎಂಟು ರೂಪಗಳಿಂದ ನೀನು ನಮ್ಮೊಳಹೊರಗೆ ಮಾಡುವ ವ್ಯಾಪಾರಗಳ ಬಗೆಯರಿಯದೆ, ನಾನು ತಬ್ಬಿಬ್ಬುಗೊಳಗಾದೆ=ದಿಕ್ಕುತೋರದೆ ಹೋದೆ. ಆದ್ದರಿಂದ ಎಲೈ ದಯಾಬ್ಧಿಯೇ, ನಿನ್ನ ಶರಣರದ್ವಾರಾ ಶ್ರುತಿಸ್ಮೃತಿಗಳಲ್ಲಿ ಉಕ್ತವಾದ ನಿನ್ನ ಮಹಾತ್ಮೆಗಳನ್ನು ನನ್ನ ಮನಸ್ಸಿಗೆ ಹಿಡಿಯುವಂತೆ ಬೋಧಿಸಿ ಈ ಸಂಸಾರದಿಂದ ಪಾರಗಾಣಿಸು ಎಂದು ಬೇಡುತ್ತೇನೆ.

೫ ಆರು ಹತ್ತರ ಮೂಲದಿ=(೬+೧೦=೧೬) ಹದಿನಾರು ಕಳೆಗಳುಳ್ಳ ಲಿಂಗ ಶರೀರವನ್ನೇ ಮೂಲಾಧಾರಮಾಡಿಕೊಂಡು, ಹದಿನಾರು ಕಳೆಗಳು ಯಾವುವೆಂದರೆ, ಪಂಚಭೂತಗಳು, ಪಂಚತನ್ಮಾತ್ರಗಳು, ಪಂಚಜ್ಞಾನೇಂದ್ರಿಯಗಳು, ಮತ್ತು ಮನಸ್ಸು, ಇಂತು ಈ ಹದಿನಾರು ಕಳೆಗಳುಳ್ಳದ್ದು ಲಿಂಗ ಶರೀರವು. ಇದು ಜೀವನ ಸ್ವರೂಪ ಶರೀರಕ್ಕೆ ಹೊಟ್ಟೆಸಂತೆ ಸುತ್ತಲೂ ಆವರಿಸಿಕೊಂಡಿರುತ್ತದೆ.

ಹಡೆದ ತಾಯಿ ಮಾಯದಿ ಹಿಡಿದು ಬದುಕು ಮಾಡಿಸುವಳು
ಒಡಹುಟ್ಟಿದ್ದೈವರು ಎನ್ನ ಕಡೆಗಣ್ಣಿಂದೀಕ್ಷಿಸರೊ
ಬಿಡದೆ ಹತ್ತಿರ ಕಾದಿಪ್ಪ ನುಡಿಸನು ಹಿರಿಯಣ್ಣನವನ
ಮಡದಿಯು ತ್ಯಾಗಕ್ಕೇನೆಂಬೆ ತನ್ನ ಒಡವೆ ಲೇಶವೀಯಳೊ ೬

---

ಆರು ಮಂದಿಗಳು ನನ್ನನ್ನು ಬಿಡದೆ=ಅರಿಷಡ್ವರ್ಗಗಳು (ಕಾಮಕ್ರೋಧ ಲೋಭ ಮೋಹ ಮದ ಮತ್ಸರ) ಮತ್ತೊಂದು ವಿಚಾರ ಮಾಡದಂತೆ, ಘೋರೈಸುವರು-ಸದಾ ಕಾಡುತ್ತಾರೆ.

ಇರು ಮೂರು ವಿಧದ ಸೋಪಸ್ಕರ ಒಂದಾದರೂ ಇಲ್ಲ=(೬+೩=೯) ಶ್ರವಣ, ಕೀರ್ತನ, ಸ್ಮರಣ, ಪಾದಸೇವನ, ಅರ್ಚನ, ವಂದನ, ದಾಸ್ಯ, ಸಖ್ಯ, ಆತ್ಮನಿವೇದನವೆಂಬ ನವವಿಧ ಭಕ್ತಿಗಳೆಂಬ ಸೋಪಸ್ಕರ ಎಂದರೆ ಮುಕ್ತಿ ಮಾರ್ಗದಲ್ಲಿ ಪಾಥೇಯ ಸ್ವರೂಪವಾದ ಇವುಗಳಲ್ಲಿ ಒಂದಾದರೂ ಇಲ್ಲ.

ಆರೆ ಇಬ್ಬರು ಸವತೇರ ಹೋರಾಟಕ್ಕೆ ಏನೆಂಬೆ=ಹೇಗಾದರೂ ಸಾಧನೆಮಾಡಿಕೊಳ್ಳೋಣವೆಂದರೆ, ಆಶಾ-ಲಜ್ಜಾ ಎಂಬ ಇಬ್ಬರು ಸವತಿಯರು ಕಲಹವಾಡುತ್ತಾ ನನ್ನನ್ನು ಬಾಧಿಸುತ್ತಾರೆ. ಅಂದರೆ ಆಸೆಯು ಅಪೇಕ್ಷಿಸಿ ಮುಂದಕ್ಕೆ ತಳ್ಳಿದರೆ, ಲಜ್ಜೆಯು ಹಿಂದಕ್ಕೆ ಎಳೆಯುತ್ತದೆ. ಇವರಿಬ್ಬರ ಹಿಡಿತಕ್ಕೆ ಸಿಕ್ಕಿ ಯಾವಾಗ ಯಾರಬಲವು ಹೆಚ್ಚಾಗುತ್ತದೆಯೋ ಆಗ ಆ ರೀತಿ ನಡೆದು ಅದರಿಂದಾಗುವ ಕಷ್ಟ ಕಷ್ಟಗಳಿಗೆ ನಾನು ಗುರಿಯಾಗಬೇಕಾಗಿದೆ. ಪರಮಾತ್ಮಾ ಇದನ್ನು ನಾನು ಸಹಿಸಲಾರೆನು ಕಾಪಾಡು.

೬ ಹಡೆದ ತಾಯಿ=ಮೂಲ ಪ್ರಕೃತಿಯಾದ ಮಾಯಾದೇವಿಯು ಈ ಜೀವನನ್ನು ಸಂಸಾರದಲ್ಲಿ ಪ್ರವೃತ್ತನನ್ನಾಗಿ ಮಾಡುತ್ತಾಳೆ. ಹಡೆದ ತಾಯಿಯೆಂಬುವ ಮಾತು ಮುಂದಕ್ಕೆ ತನಗೆ ಅಪಕೀರ್ತಿ ತಂದೀತೆಂದು ಸಕಲ ಅನುಕೂಲಕೊಟ್ಟು. ಹೊಡೆದು ಬಡಿದು ಬುದ್ಧಿ ಕಲಿಸಿ ಸಾಧನೆಯೆಂಬ ಬದುಕು ಮಾಡಿಸುತ್ತಾಳೆ. ಇದು ಸತ್ಸಾಧನೆಗಾದರೆ ಬಹಳ ಸಂತೋಷ, ಹಾಗಲ್ಲದೆ ಮುದ್ದಿನಿಂದ ಸಾಕಿ ವಿಷಯೋಪ ಭೋಗಗಳಲ್ಲೇ ಮಗ್ನನನ್ನಾಗಿ ಮಾಡಿದರೆ ನನ್ನ ಬದುಕು ವ್ಯರ್ಥವಾಗುತ್ತದೆ.

ಅತ್ತ ಅತ್ತಿಗೆಯು ಎನ್ನ ಸುತ್ತಮುತ್ತ ಕಾದು ಕಟ್ಟಿ
ಎತ್ತ ಹೋಗಲೀಸರೊ ತೋರಲೀಸರೋ ನಿ
ನ್ನತ್ತ ಬಾರಲೀಸರೊ ಹೊತ್ತಿಗೆ ಬಂದೊದಗಿ ನೃಪನ
ಭೃತ್ಯರು ಎಳೆದೊಯ್ಯುವಾಗ ಹೆತ್ತಯ್ಯ ನೀ ಬಿಡಿಸದಿರಲು
ಮತ್ತಾರು ಗತಿಪೇಳೊ ೭

---

ಒಡಹುಟ್ಟಿದೈವರು ಎನ್ನ ಕಡೆಗಣ್ಣಿಂದೀಕ್ಷಿಸರೊ=ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನರೆಂಬ ಪಂಚಪ್ರಾಣರು ನನ್ನ ಒಡಹುಟ್ಟಿದವರಾದರೂ ಅಂತಃಕರಣದಿಂದ ನನ್ನ ಕಡೆಗೆ ಪೂರ್ಣ ಕಟಾಕ್ಷದಿಂದ ನೋಡದೆ ಉಪೇಕ್ಷೆಯಿಂದ, ಕಡೆಗಣ್ಣಿನಿಂದ ಎಂದರೆ ನೋಡಿ ನೋಡದ ಓರೆನೋಟದಿಂದ ನೋಡುತ್ತಾರೆ. ಅಂದರೆ ಯೋಗಮಾರ್ಗಕ್ಕೆ ಅನುಕೂಲವಾಗರು ಎಂದರ್ಥ.

ಬಿಡದೆ ಹತ್ತಿರ ಕಾದಿಪ್ಪ ಹಿರಿಯಣ್ಣನು ನುಡಿಸನು=ಸದಾ ಸಮೀಪದಲ್ಲಿಯೇ ಕಾದು ಕೊಂಡಿರುವನಾದರೂ ಮುಖ್ಯಪ್ರಾಣನೆಂಬ ಹಿರಿಯಣ್ಣನು ಮಾತನಾಡಿಸುವುದೇ ಇಲ್ಲ. ಎಂದರೆ ಸತ್ಸಾಧನೆಯ ಪ್ರಸ್ತಾಪವನ್ನೇ ಮಾಡುವುದಿಲ್ಲ. ನಿನ್ನಗತಿ ಯೇನೆಂದು ವಿಚಾರಿಸುವುದಿಲ್ಲ.

ಇನ್ನು ಅವನ ಮಡದಿಯ ತ್ಯಾಗಕ್ಕೆ ಏನೆಂಬೆ, ತನ್ನ ಒಡವೆ ಲೇಶಮೀಯಳು=ಹೀಗೆ ಒಡಹುಟ್ಟಿದ ಅಣ್ಣನೇ ಉದಾಸೀನನಾದಮೇಲೆ, ಅವನ ಹೆಂಡತಿಗೆ ನನ್ನ ಮೇಲೆ ಎಷ್ಟು ಪ್ರೀತಿ ಇರಬೇಕು! (ಅಣ್ಣನು ಪ್ರೀತಿ ಮಾಡಿದರೇ ಅತ್ತಿಗೆಯು ಸಹಿಸದಿರುವುದು ಲೋಕ ರೂಢಿಯಾಗಿದೆ. ಹೀಗಿರುವಲ್ಲಿ ಅವನೇ ಉಪೇಕ್ಷೆ ಮಾಡಿದರೆ ಇನ್ನು ಕೇಳಬೇಕಾದುದೇನು ?)

ಭಕುತಿದಾಯಕಳಾದ ಭಾರತೀ ದೇವಿಯೆಂಬ ಈ ಅತ್ತಿಗೆಯು ತನ್ನ ಒಡವೆಯೆಂದರೆ ಸ್ವತಃ ದ ಜ್ಞಾನಭಕ್ತಿ ವೈರಾಗ್ಯಗಳೆಂಬ ಆಭರಣಗಳಲ್ಲಿ ಒಂದನ್ನೂ ದಯಮಾಡಿ ಕೊಡಳು. ಅವುಗಳಿಲ್ಲದೆ ನಾನು ಶೋಭಿಸೆನು. ಆಕೆಯ ಉದಾರ ಬುದ್ಧಿಗೆ ಏನೆಂದು ಹೇಳಲಿ ? ದೇವಾ, ನೀನಾದರೂ ನಿನ್ನ ಸೊಸೆಗೆ ಹೇಳಿ ನನ್ನ ಸತ್ಸಾಧನೆಗೆ ಅನುಕೂಲ ಮಾಡಿ ಕೊಡು ಎಂದು ಪ್ರಾರ್ಥಿಸುತ್ತೇನೆ.

ಮನೆಯೊಳು ನಾಳಿನ ಗ್ರಾಸಕ್ಕನುವಿಲ್ಲ
ಖಣವಿಂದ ಕಡೆಹಾಯ್ವ ಮಾರ್ಗಲೇಶ ನಾಕಾಣೆ
ಗುಣಿಸಲು ಈ ಕಾಳ ಪುರುಷನ ಬಂಧನವಿಂದ ನಾನಿನ್ನು
ದಣಿವೆನು, ಇನ್ನೇನು ನಿನ್ನಣುಗರೊಳಾಡಿಸೋ ೮

೭ ಅತ್ತೆ ಅತ್ತಿಗೆಯು=ಸಂಶಯ ವಿಪರ್ಯಯವೆಂಬ ಇಬ್ಬರು ಸ್ತ್ರೀಯರು, ಜರಾಸಂಧನ ಮಕ್ಕಳು. ಕಂಸನ ಹೆಂಡಂದಿರು. ಅಸ್ತಿ ಪ್ರಾಸ್ತಿ ಎಂಬ ನಾಮವುಳ್ಳವರು; ಲೋಕದ ಅತ್ತೆ ಅತ್ತಿಗೆಯರಂತೆ ನನ್ನನ್ನು ಕಾಡುತ್ತಾ ಸುತ್ತ ಮುತ್ತಿ ನಾನು ಯಾರು ಎಲ್ಲಿದ್ದೇನೆಂದು, ನೀನು ಯಾರು ಎಲ್ಲಿರುವೆಯೆಂದೂ ತಿಳಿಯ ಗೊಡದಂತೆ, ಎರಡು ತೆರೆಗಳಂತೆ ಇದ್ದು. ಎತ್ತ ತೋರಲೀಸರೋ=ಜೀವನ ಸ್ವರೂಪ ತೋರ ಗೊಡದಂತೆ ಮುಚ್ಚಿಕೊಂಡಿರುವುದು ಒಂದು. ಪರಮಾತ್ಮನನ್ನು ತೋರಗೊಡದಂತೆ ಮುಚ್ಚಿಕೊಂಡಿರುವುದು ಒಂದು. ಇದೇ ಜೀವನು ಪರಮಾತ್ಮಗೆ ದೂರು ಹೇಳುವ ವಿವರ. ನನಗೆ ಮುಸುಕು ಮುಚ್ಚಿಕೊಂಡಿದೆ. ನನ್ನನ್ನು ನಿನ್ನ ಬಳಿ ಬರಗೊಡರು. ಈ ಮುಸುಕನ್ನು ತೆಗಸಿ ನಿನ್ನ ಪಾದ ಸಂದರ್ಶನವನ್ನು ಕರುಣಿಸಿ ಕಾಪಾಡು.

ಹೊತ್ತಿಗೆ ಬಂದೊದಗಿ ನೃಪನ ಭೃತ್ಯರು ಎಳೆದೊಯ್ಯುವಾಗ =ಈ ಸಂಸಾರದಲ್ಲಿ ಹೀಗೆಯೇ ಕಾಲವನ್ನು ನೂಕುತ್ತಿರುವಾಗ, ಹೊತ್ತಿಗೆ ಬಂದು=ಆಯುಃ ಪ್ರಮಾಣ ಮುಗಿದ ಹೊತ್ತಿಗೆ ಸರಿಯಾಗಿ ಬಂದು, ನೃಪನ ಭೃತ್ಯರು—ನಿನ್ನಿಂದ ನಿಯಮಿಸಲ್ಪಟ್ಟ ಕಾಲಾಖ್ಯಯಮನ ಭೃತ್ಯರು ರೋಗಾದಿ ರೂಪದಿಂದ ಮುತ್ತಿ ಕಾಡಿ, ಮೃತ್ಯುವಿನ ವಶಮಾಡಿ ಎಳೆದುಕೊಂಡು ಹೋಗುತ್ತಿರುವಾಗ ಹೆತ್ತಯ್ಯ ನೀ ಬಿಡಿಸದಿರಲು=ಸರ್ವ ಲೋಕ ಜನಕನಾದ ನೀನೇ ಬಿಡಿಸಿ ಕಾಪಾಡದಿರಲು, ಮತ್ತ್ಯಾರು ಗತಿ ಪೇಳೋ=ಇನ್ನು ನಮಗೆ ದಿಕ್ಕು ಯಾರು ? ಪರಮಾತ್ಮ ಈ ಮೃತ್ಯುಬಾಧೆಯಿಂದ ಬಿಡಿಸಿ ನಿತ್ಯಲೋಕವಾದ ನಿನ್ನ ವೈಕುಂಠದಲ್ಲಿಟ್ಟು ಕಾಪಾಡು.

೮ ಮನೆಯೊಳು ನಾಳಿನ ಗ್ರಾಸಕ್ಕೆ ಅನುವಿಲ್ಲ=ಈ ದೇಹದಿಂದ ಮುಂಬಣ ಜನ್ಮಕ್ಕೆ ಗ್ರಾಸ ಎಂದರೆ ಸಾಧನೆ ಲೇಶವಾದರೂ ಇಲ್ಲ. ಇದಕ್ಕೆ ಸಂಶಯವಿಲ್ಲ.

ನಿನ್ನಹೊಂದಿ ಇಷ್ಟು ಭವಣೆಯನ್ನು ಬಡಲೀ ಜನರು
ನಿನ್ನ ದೂರಿಜರಿವರೋ ನಾನಿನ್ನು ತಾಳಲಾರೆ
ಘನ್ನ ಕರುಣಾ ಸೌಭಾಗ್ಯ ಸಂಪನ್ನ ಗೋಪಾಲವಿಠಲ
ಬಿನ್ನಪವ ಚಿತ್ತೈಸಿ ಮನ್ನಿಸೈಯ ಮಾಧವ ೯

---

ಋಣದಿಂದ ಕಡೆಹಾಯ್ವ ಮಾರ್ಗವ ಲೇಶನಾಕಾಣೆ. ಋಣ=ಸಾಲ, ಇದು ಮೂರುಬಗೆ ಯಾದದ್ದು. ದೇವಋಣ, ಋಷಿಋಣ, ಪಿತೃಋಣವೆಂದು. ಯಜ್ಞಾದಿಗಳಿಂದ ದೇವಋಣವೂ, ಅಧ್ಯಯನಾದಿಗಳಿಂದ ಋಷಿಋಣವೂ, ಸತ್ಸಂತಾನಾಭಿವೃದ್ಧಿಯಿಂದ ಪಿತೃಋಣವೂ ಪರಿಹಾರವಾಗುತ್ತದೆ. ಇದು ಜನ್ಮ ಜನ್ಮಕ್ಕೂ ನಿಂತು ನಿಂತು ಅಪಾರವಾಗಿದೆ. ಈ ಋಣದಿಂದ ಪಾರಾಗುವ ಬಗೆಯು ನನಗೆ ತೋರದಾಗಿದೆ. ಕಾಳ ಪುರುಷ=ಎಂದರೆ ಕಲಿಪುರುಷನ ಬಂಧನದಿಂದ ನಾನಿಷ್ಟು ದಣಿದಿರುವೆನು ಇದನ್ನು ನೀಗಿಸಬೇಕಾಗಿ ನಿನ್ನ ನಾಗರೊಳು=ನಿನ್ನನ್ನೇ ಅನುಸರಿಸಿ ನಡೆವ ಭಕ್ತರಲ್ಲಿ, ಇಡಿಸು=ಸಹವಾಸವನ್ನು ಕೊಟ್ಟು ಉದ್ಧಾರಮಾಡು.

೯ ಏನಾದರೂ ಅನಾದ್ಯನಂತ ಕಾಲದಲ್ಲಿಯೂ ನಾನು ನಿನ್ನವನು. ನಿನ್ನನ್ನು ಬಿಟ್ಟು ಅನ್ಯರಕ್ಷಕರು ನನಗೆ ಇಲ್ಲ. ಮನಃಪೂರ್ವಕವಾಗಿ ನಾನು ನಿನ್ನನ್ನು ಹೊಂದಿರುತ್ತೇನೆ. ಅಂಥಾದ್ದರಲ್ಲಿ ನಾನು ಹೀಗೆ ಕಷ್ಟಕ್ಕೆಸಿಕ್ಕಿ ಒದ್ದಾಡುತ್ತಿರಲು ಇದನ್ನು ಕಂಡು ಇತರರು-' ನೋಡಯ್ಯಾ ಇವನು ಪರಮಾತ್ಮನ ಭಕ್ತನಂತೆ ! ಹೇಗೆ ಕಷ್ಟಪಡುತ್ತಿದ್ದಾನೆ. ದೇವರೆಂಬುವನು ಎಲ್ಲಿದ್ದಾನಯ್ಯಾ ? ಇವೆಲ್ಲಾ ಬರೀ ಭ್ರಾಂತಿ ' ಎಂದು ಮುಂತಾಗಿ ನಾನಾವಿಧವಾಗಿ ನಿನ್ನನ್ನು ದೂರುವರು. ಇದನ್ನು ನಾನು ಕೇಳಿ ಸಹಿಸಲಾರೆ. ಲೋಕದಲ್ಲಿ ಯಾವುದೋ ಒಂದು ನಿಮಿತ್ತದಿಂದ ಪ್ರಿಯರಾಗಿರುವವರನ್ನು ದೂರಿದರೆ ಸಹಿಸಲಾಗುವುದಿಲ್ಲ. ಹೀಗಿರುವಲ್ಲಿ, ನೀನು ಅನಮಿತ್ತ ಬಾಂಧವನು. ನಮ್ಮನ್ನು ಬಿಟ್ಟಿರುವವನಲ್ಲ. ಪರಮ ಪ್ರಿಯನು. ಇಂಥಾ ನಿನ್ನನ್ನು ದೂರಿದರೆ, ನಾನು ಹೇಗೆ ತಾನೇ ಸಹಿಸೇನು ? ಎಲೈ ಮಹಾಕರುಣಾಳುವೇ, ಅಷ್ಟಸೌಭಾಗ್ಯ ಸಂಪನ್ನನೇ, ಜ್ಞಾನಿ ಸಂರಕ್ಷಕನೇ, ಪಾಪ ಪರಿಹಾರಕನೇ, ಶರಣ ಪಾಲಕನೇ, ನನ್ನ ವಿಜ್ಞಾಪನೆಯನ್ನು ಮನ್ನಿಸಿ, ಕೈಕೊಂಡು ಕಾಪಾಡು, ಲಕ್ಷ್ಮೀಪತಿಯೇ ನಿನಗೆ ಅನಂತಾನಂತ ನಮಸ್ಕಾರಗಳು.

೬೧ ರಾಗ ಭೈರವಿ ಆದಿತಾಳ

ಯತಿಯು ನೀನಾದದ್ದು ಕ್ಷಿತಿಯೊಳು ನಾಬಲ್ಲೆ
ಪತಿತ ಪಾಮರ ಪಾವನ, ಪವಮಾನ ಪ.

ಸತಿ ನಿನ್ನ ನಡತೆಗೆ ಪ್ರತಿಕೂಲಳೆಂತೆಂಬ
ಅತಿಶಯವೇ ಕಾರಣ ಪವಮಾನ ಅ.

ಹಗಲುತ್ತರಾಯಣ ಮಿಗೆ ಶುಕ್ಲಪಕ್ಷ ಭಾ
ನುಗಳ ನೀನಾಶ್ರಯಿಸೆ,-ಪವಮಾನ
ಸುಗುಣೆ ಕೃಷ್ಣಪಕ್ಷ ಗಗನೇಂದು ರಾತ್ರಿಯೊಳ್
ಪೊಗೆ ದಕ್ಷಿಣಾಯನದಿ-ಪವಮಾನ
ವಿಗಡ ಹೆಂಡತಿಮಾರ್ಗ ತೆಗೆದಳು ಬೇರೆಂದು
ಒಗತನವೇಕೆಂದು-ಪವಮಾನ
ಬಗೆಬಗೆಗಾಳ್ಯಾಗಿ ಚರಿಸಿ ಜಗವನೆಲ್ಲ
ದುಗುಡ ತನದಲಿ ಬಂದು-ಪವಮಾನ ೧

ಪತಿಗಳು ಶಯನವ ಪೃಥಕು ಮಾಡುವುದೆ
ಸತಿಯರ ದಂಡನೆಂದು-ಪವಮಾನ
ಮತಿಗೆ ನೀ ತಂದು ಮಮತೆಯೊಳಂಜನೆ
ಸುತನಾಗಿ ಅವನಿಯಲಿ-ಪವಮಾನ
ಪಥದಿ ಬ್ರಹ್ಮಚರ್ಯವ್ರತದಿ ರಾಮನಪಾದ
ಶತಪತ್ರಗಳ ಬಿಡದೆ, ಪವಮಾನ
ನುತಿಸಿನುತಿಸಿದಿನ ಅತಿಶಯ ಕಳೆದರೂ
ರತಿಗೊದಗಲಿಲ್ಲೆಂದು ಪವಮಾನ ೨

ಎಷ್ಟಾದರಾಕೆಯು ಬಿಟ್ಟು ಬಾರದಲಿರೆ
ಸಿಟ್ಟಲಿ ಮನದೊಳಗೆ-ಪವಮಾನ
ಇಟ್ಟರಿನೊಬ್ಬಳ ಮುಟ್ಟವಾಗುವಳೆಂಬ
ಗುಟ್ಟು ಘಟ ? ತಿಳಿದ-ಪವಮಾನ

ನೆಟ್ಟನೆ ಇರುಳೊಳು ನೆರೆದು ಹಿಡಿಂಬಿಯೊಳ್
ಪುಟ್ಟಿಸಿದೆಯೊ ಮಗನ-ಪವಮಾನ
ಇಷ್ಟಾದ ಕಾಲಕ್ಕೆ ಘಟ್ಟಿಮನದಲಿರೆ
ಬಿಟ್ಟು ಕಡೆಯುಗದಿ-ಪವಮಾನ ೩

ಹೆಂಡತಿ ವಶವಿಲ್ಲ ಭಂಡಾಟಿ ಸಂಸಾರ
ಕೊಂಡೇನು ಮಾಡಲೆಂದು-ಪವಮಾನ
ಮಂಡೆಯು ಬೋಳಿಸಿ ಮಹಿಯೊಳು ಜನಿವಾರ
ಚಂಡಿಕೆಯನೆ ತೊರೆದು-ಪವಮಾನ
ದಂಡ ಕಷಾಯ ಕಮಂಡಲಧರಿಸಿ ಮ
ತ್ತುಂಡೆ ಭಿಕ್ಷಾನ್ನಗಳ-ಪವಮಾನ
ಪಾಂಡಿತ್ಯದಿಂದ ಭೂಮಂಡಲ ಚರಿಸುತ್ತ
ಪುಂಡರ ದಂಡಿಸುತ-ಪವಮಾನ ೪

ಅನ್ನಲೇತಕೆ ಇಂಥದನಂತ ಚರ್ಯವು
ನಿನ್ನೊಳಗುಂಟುಕೇಳೊ-ಪವಮಾನ
ಮನ್ನಿಸದಿದ್ದರೆ ಎನ್ನನು ಈ ಬನ್ನ
ಮನ್ನೆಮನ್ನೆಗೆ ದೂರುವೆ-ಪವಮಾನ
*ಎನ್ನೊಡೆಯಗುರು ಗೋಪಾಲವಿಠ್ಠ
ಲನ್ನ ಪಾದಾಬ್ಜಗಳ-ಪವಮಾನ
ನಿನ್ನವನೆನಿಸಿ ಹೃದ್ವನಜದಲಿ ತೋರೊ
ಅನ್ಯಥನೋಡದಲೆ-ಪವಮಾನ ೫

೬೨ ರಾಗ ಸಾವೇರಿ ಅಟತಾಳ

ಹರಿಯೇ ನಮ್ಮ ಹಿರಿಯರು ಮಾಡಿದ ಉಪಕಾರ
ಮರೆಯದೆ ಸಲಹೋ ಎನ್ನ ಪ.

---

*ಎನ್ನೊಡೆಯ ವೆಂಕಟ ಮೋಹನ ವಿಠ್ಠ
ಲನ್ನ ಪಾದಾಬ್ಜಗಳ-ಪವಮಾನ (ಪಾಠಾಂತರ).

ಜನಕನಾಜ್ಞೆಯ ತಾಳಿನೀನು
ವನವನವ ಸಂಚರಿಪ ಕಾಲದಿ
ಹನುಮಂತನಾಗಿ ಶರಧಿಲಂಘಿಸಿ
ವನಿತೆ ಕುಶಲವ ತಿಳುಹಿಸೀ
ಅನುಜ ಮೂರ್ಛಿತನಾಗೆ ಅಸುಪಿತ್ರ
ದನುಜ ರಥವೇರಿ ರಣಕೆ ಬರಲಾ
ಕ್ಷಣದಿ ವಾಹನನಾಗಿ ಜಯಿಸಿ ನಿನ್ನ
ಘನತೆಯನ್ನುಳುಹಿದ ಕಾರಣ ೧

ಸುರದನುಜರಿಗಜೇಯ ಶೈವನು
ವರಬಲನು ಪಾಷಂಡ ದುರ್ಮತಿ
ಜರೆಯಸುತನು ನಿನ್ನಕೂಡೆ ಸಂ
ಗರಕೆ ಬರಲು ನೀ ನಿಲ್ಲದೆ
ಶರಧಿಯೊಳು ಪುರ ಕಟ್ಟಿಸಿರುತಿರೆ
ವರ ವೃಕೋದರನಾಗಿ ದುಷ್ಟನ
ಸರಕು ಮಾಡದೆ ಶೀಳಿ ನಿನ್ನ ಭಯ
ಪರಿಹರಿಸಿ-ದ ಕಾರಣ ೨

ಹಿಂದಣ ವೈರದಲಿ ಖಳ ಕು
ಲೇಂದ್ರ ಮಣಿಮಂತನೆಂಬ ದೈತ್ಯನು
ಬಂದು ಅವನಿಯೊಳು ಪುಟ್ಟಿ ನೀನೆ ತಾ
ನೆಂದು ದುರ್ಮತವ ಪ್ರಬಲಿಸಿ
ಕಂದುಗೊರಳನೆ ಜಗಕೆ ಕಾರಣ
ನೆಂದುನಿನ್ನಾಚ್ಛಾದಿಸಿರಲಾ
ನಂದತೀರಥರಾಗಿ ನಿನ್ನನು
ಮುಂದಕೆತಂದ ಕಾರಣ ೩

ನಿನ್ನನೇ ಗುರು ದೈವವೆಂಬರು
ನಿನ್ನಪ್ರೀತಿಯ ಸತತ ಪಡೆವರು
ನಿನ್ನವಜ್ಞತೆ ಲೇಶತಾಳರು
ನಿನ್ನನ್ನೆ ಸೇವಿಸುವರು
ನಿನ್ನ ಅಜ್ಞದಿ ಜಗವ ಪೊರೆವರು
ನಿನ್ನಲೇ ಪರಮಾದರವರಿಗೆ
ನಿನ್ನ ಕರುಣವರಲ್ಲಿ ಪೂರ್ಣಪ್ರ
ಸನ್ನವಾಗಿರ್ದ ಕಾರಣ ೪

ಹರಿಯೆ ನಿನ್ನವರವನು ನಾನು
ಶರಣು ಪೊಕ್ಕೆನು ಕರವ ಪಿಡಿದು, ದು
ಸ್ತರಭವಾಂಬುಧಿ ಬೇಗದಾಟಿಸಿ
ನಿರುಪದ್ರವಸ್ಥಳ ಪೊಂದಿಸಿ
ನಿರುತ ನಿನ್ನಾರಾಧನಿತ್ತು
ಕರಣಗಳಿಗೆ ಪ್ರತ್ಯಕ್ಷನಾಗಿ
ಪರಮ ಭಕ್ತರಸಂಗ ಕೊಡು ಜಗ
ದ್ಗುರುವೆ ಗೋಪಾಲವಿಠಲ ೫

೬೩ ರಾಗ ಪೂರ್ವಕಲ್ಯಾಣಿ ಆದಿತಾಳ

ಪಾಲಿಸೋ ಕೃಷ್ಣ ಎನ್ನ ಪಾಲಿಸೋ ಪ.

ಪಾಲಿಸೊ ಪಾಲಿಸೊ ಪ್ರಣತರ ಪಾಲ ಸು
ಶೀಲ ಧರ್ಮ ದ್ರುಮಜಾಲ ವಿಶಾಲ ಅ.

ಕೋಟಿ ತರಣಿಭಾ ಮಕುಟ ವಿಸ್ಫುಟಿತ
ಹಾಟಕಾಂಬರ ಕೈಟಭಹಾರಿ ೧

ಕಮಲೋಧ್ಭವ ಭವ ಸುಮನಸ ನುತಪದ
ಕಮಲ ಎನ್ನ ಭವಶಮಲವ ಕಳೆದು ೨

ಕುಂಡಲ ಮಂಡಿತ ಗಂಡಸ್ಥಳ ಇಭ
ಸೊಂಡಿಲ ಬಾಹು ಪ್ರಚಂಡ ವಿಕ್ರಮನೆ ೩

ನಾಸ ಚಂಪಕ ಸುವಿಲಾಸಗೆಲುವಸ್ಮಿತ
ಹಾಸ ನಿನ್ನವರ ದಾಸದಾಸನ ೪

ಅರಿದರ ಧರ ಸುಂಧರ ಸಿರಿವರ ಮುರ
ಹರ ಕರೆಕರೆಭಯ ಪರಿಹರ ಮಾಡೊ ೫

ಚಿತ್ತೈಸುವುದೆಮ್ಮತ್ಯಪರಾಧ ಗ
ಣಿತ್ತಣಿಸದೆ ಎನ್ನ ತ್ತಲೀಕ್ಷಿಸಿ ೬

ರಾಜಿತವರದ ಗೋಪಾಲವಿಠಲ ರವಿ
ತೇಜ ರಾಜಕುಲ ರಾಜಾಧಿರಾಜ ೭

೬೪ ರಾಗ ಪೂರ್ವಕಲ್ಯಾಣಿ ಆದಿತಾಳ

ಒಂದಾ ಗುಣಸಾಂದ್ರ. ರಾಘ
ವೇಂದ್ರ ಗುರು ಸದ್ವೈಷ್ಣವ ಕುಮುದಕೆ ಅ.

ಶ್ರೀ ರಘುರಾಮ ಪದಾಂಬುಜ ಭೃಂಗ
ಮಾರುತಮತ ಶುಭವಾರಿನಿಧಿಗೆ ಪೂರ್ಣ ೧

ಶ್ರೀಕರ ಹರಿಯು ನಿರಾಕರಿಸುವ ದುಷ್ಟ
ಭೀಕರಮಾಯ್ಗಳ ಮುಖಕಮಲಕೆ ಪೂರ್ಣ ೨

ವರದ ಗೋಪಾಲವಿಠಲನ ವಾರುತೆಗೆ
ಹರುಷ ಬಡುವ ಹರಿಭಕುತ ಚಕೋರಕೆ ೩

೬೫ ರಾಗ ಕಾಂಬೋಧಿ ಝಂಪೆತಾಳ

ಯತ್ನಕೆ ಲೇಶ ಒಲಿಯುವನಲ್ಲವೋ ಪ.

ಅತ್ಯಂತ ಮಹಿಮ ನೀನೊಲಿಯಲತಿ ಸುಲಭ ಅ.

ತಲೆಯೂರಿ ತಪವ ಮಾಡಿದರು ಒಲಿಯುವನಲ್ಲ
ಛಳಿ ಮಳೆಯೊಳು ಜಲದಿ ಮುಳುಗಲೊಲಿಯೆ
ಆಳಲಿ ಬಿಸಿಲಿನ ಝಳದಿ ಮರಳಿದರು ನೀನೊಲಿಯೆ
ಜಲಜಾಕ್ಷ ನೀನಾಗಿ ಕರುಣಿಸ-ದನಕ ೧

ನಾನಾ ಕಲಾ ವಿದ್ಯೆಗಳ ಕಲಿಯೆ ನೀನೊಲಿಯೆ
ಏನೇನು ವ್ರತಗಳನು ಮಾಡಲೊಲಿಯೆ
ಮೌನದಲಿ ಬೆರಳೆಣಿಸಿ ಯತಿಯೆನಿಸೆ ನೀನೊಲಿಯೆ
ಶ್ರೀನಾಥ ನೀನಾಗಿ ಕರುಣಿಸ-ದನಕ ೨

ಧನವ ಕೊಟ್ಟರು ಒಲಿಯೆ ದಾನಮಾಡಲು ಒಲಿಯೆ
ಮಣಿ ಭೂಷಣದಿ ಪೂಜೆಯನು ಮಾಡಲೊಲಿಯೆ
ಉಣದಲೆ ಉಪವಾಸವಿದ್ದ ಕಾಲಕು ಒಲಿಯೆ
ವನಜಾಕ್ಷ ವರದ ಗೋಪಾಲ ವಿಠ್ಠಲರೇಯ ೩

೬೬ ರಾಗ ಸೌರಾಷ್ಟ್ರ ಆದಿತಾಳ

ನಂಬಿ ನೀ ಕೆಡದಿರು, ಇಹಲೋಕ ಸುಖವೆಂಬ
ಕಂಬಳಿಯೊಳ ಬುತ್ತಿ ಪ.

ನೀ ಬೆಲೆಯ ಊಟ ಪರಲೋಕ ಸುಖಸಾರ
ವೆಂಬೋದೆ ನಿಜಭಕುತಿ, ಹೇ ಮನವೆ ಅ.

ನ್ಯಾಯವಿಲ್ಲದೆ ನಿನ್ನ ಕಾಯ ಪೋಷಣೆಯೋ
ತೋಯದೊಳಗೆ ಹೋಮ
ಆಯಾಸವನು ಬಟ್ಟು ಮನೆಯ ಕಟ್ಟಿಸುವುದು
ಹೇಯಗೊರಳೆ ಧಾಮ
ಮಾಯಕ್ಕೆ ಸಿಲುಕಿ ದಾಯಾದಿ ಗುಣಿಪುದೆ
ವಾಯಸಗಳ ಪ್ರೇಮ
ನೋಯದು ಮನಸಿಗೆ ಹೇಯ ತಾ ಪುಟ್ಟದು
ನ್ಯಾಯ ಬುದ್ಧಿಯ ಕಾಮ, ಹೇ ಮನವೆ ೧

ದಣಿಸಿದಣಿಸಿ ದೇಹಧನವ ಕೂಡಿಸುವುದೆ
ನೊಣ ಜೇನಿನ ವೃತ್ತಿ
ಬಣಗು ದೈವಂಗಳ ಭಕ್ತಿಯರ್ಚಿಸುವುದೆ
ಹೆಣಕೆ ಮಾಡಿದ ಅರ್ಥಿ
ವನಿತೆ ಸುತರು ಬಂಧುಜನ ಸ್ನೇಹವೆಂಬೋದು
ಪ್ರಣತಿಯೊಳಗಿನ ಜ್ಯೋತಿ
ಒಣಗ್ಹೋಗಲುಪಜೀವನವೆಂಬ ತೈಲವು
ಕ್ಷಣಕೆ ನಿಲ್ಲದು ಪ್ರೀತಿ, ಹೇ ಮನವೆ ೨

ಹರಿಸಮರ್ಪಣರಿಯದೆ ಸವಕರ್ಮವ ಮಾಡೆ
ಹುರಿದು ಬಿತ್ತಿದ ಬೀಜ
ಸಿರಿ ಮಧ್ವಮತವನು ಪೊಂದದ ವಿಪ್ರನು
ದುರುಳನು ನಿಜಾಂತ್ಯಜ
ಪರಧನ ಪರಸತಿ ಪರನಿಂದೆಗಳುಕಿದ
ನರ ನೆರೆ ನರಕ ಭಾಜ
ಸಿರಿ ಹರಿಯನು ಮರೆದು ದಿನಗಳೆದವನಾಯು
ಕರಗಿತು ನಿರ್ವ್ಯಾಜ-ಹೇ ಮನವೆ ೩

ಪರಪೀಡಕನಾಗಿ ಇದ್ದವನ ಜನ್ಮ
ವರುಷನೂರಿದ್ದರೇನು
ಪರರಿಗೆ ಹಿತನಾಗಿ ವರುಷ ಬಾಳಿದವನು
ಎರಗು ವೈಕುಂಠವನು
ದುರುಳಮತವ ಪಿಡಿದು ಶ್ಲಾಘ್ಯಮಾಡಿದವನು
ನಿರಯವ ಬಿದ್ದವನು
ಅರಿತು ಮಾತಾಪಿತರ ಹಿಂದರ್ಚಿಸಿದವನು
ಕರೆಕರೆ ನೀಗುವನು, ಹೇ ಮನವೆ ೪

ಆಸಿಸಿ ಅರ್ಥವ ಹರಿಯು ಸೇವಿಸುವಂಥ
ದಾಸ್ಯ ಆಶ್ವದ ದಾಸ
ಆಸೆಯನೆ ಕೊಟ್ಟು ಭಾಷೆ ತಪ್ಪುವಂಥ
ಈಶನಧಃ ಕೇಶ
ದಾಸತ್ವವಹಿಸದೆ ಕಾಶಿರಾಮೇಶ್ವರ
ದೇಶ ತಿರುಗಲಾಭಾಸ
ಹೇಸಿ ಸಂಸಾರದ ಕ್ಲೇಶವೆಂಬೋದು ಕೃಷ್ಣೋ
ಪಾಸನದಿಂದ ನಾಶ ಹೇ ಮಾನವೆ ೫

ಹಲವು ತತ್ವಂಗಳ ಹಲುಬಿ ಪೇಳಿದರೇನು
ಹೊಲಬ ಪಿಡಿಯು ದನಕ
ಛಲವ ಪಿಡಿದರೇನು ತಿಳಿವಿಕೆ ನಿಜವಿಲ್ಲ
ಒಲಿಮೆ ಯಾಗದನಕ
ಕಲಕಾಲ ಸುಜನರೊಳಾಡುತ್ತಿದ್ದರೇನು
ತಲೆಯು ಬಗ್ಗಿಸದನಕ
ಹಲವು ಸಾಧನಕೆಲ್ಲ ಒಲವು ಶ್ರೀಹರಿಯೆಂದು
ತಿಳಿಯೆ ಬಂಧಮೋಚಕ-ಹೇ ಮಾನವೆ ೬

ಎಷ್ಟು ಸಾಧನಗಳು ಕೂಡಿದ್ದರೇನಿನ್ನು
ದೃಷ್ಟಿಗೆ ಹರಿ ತೋರ
ನಷ್ಟವಾಗುವಹಂಕಾರ ಬಂದಿದ್ದರೆ
ಶಿಷ್ಟಜನಕೆ ದೂರ
ಇಟ್ಟು ತೊಟ್ಟು ಬಹಳ ದಿಟ್ಟ ಸ್ತ್ರೀಯಳು
ಸ್ಪಷ್ಟ ಕುಷ್ಟಿಯು ಶೃಂಗಾರ
ಎಷ್ಟು ಶೋಭಿತಳಾಗೆ ಅವಳ ಪತಿಯು ಕ
ನಿಷ್ಟಳಾದವಳ ಸೇರ- ಹೇ ಮಾನವೆ ೭

ಗುಣತ್ರಯಾಕನುಸಾರ ಮಾಡಿದ ಕರ್ಮಗ
ಳಣ ಬೇಡ ನೀನೀಗೆ
ಗುಣಿಸು ಶ್ರೀಹರಿಯನ್ನು ನಖಶಿಖತನಕ ಹೃ
ದ್ವನಜದೊಳಗೆ ಹೊರಗೆ
ಮನುಜ ಜನ್ಮ ಮಹಾಸುಕೃತದ ಫಲ
ನಿನಗೆ ಬಂದಿದೆ ಈಗೆ
ಕ್ಷಣಿಕ ಪವಿತ್ಯವಸಾರ ಕಳೇಬರ
ದಿನ ಪೋಗುತಿದೆ ಬೇಗೆ-ಹೇ ಮನವೆ ೮

ಗುರು ಉಪದೇಶವೆಂಬುದೆ ಮಹದುರ್ಲಭ
ಪರಮ ಮಂಗಳ ಕರವೊ
ಕರೆಕರೆ ಸಂಸಾರ ಶರಧಿಯ ದಾಟಲು
ಹರಿಗೋಲು ಸ್ವಾಮಿಯವೊ
ದೊರಕೆ ಮರೆಯಬೇಡ ಗುರುವಿಜಯರಾಯರ
ಚರಣವ ಸಾರೆಲವೊ
ಪರಮ ಮಂಗಳಮೂರ್ತಿ ಗೋಪಾಲವಿಠ್ಠಲ
ದೊರೆವನು ದೂರಿಲ್ಲವೊ, ಹೇ ಮನವೆ ೯

೬೭ ರಾಗ ಸೌರಾಷ್ಟ್ರ ಅಟತಾಳ

ಸ್ಮರಿಸುವೆ ನಾನಿನ್ನ ಚರಣಕಮಲ ಗುರು
ವಿಜಯರಾಯ ಪ.

ಶರಣಜನರ ಪ್ರಿಯ ಪರಮ ಕರುಣಾನಿಧಿ
ವಿಜಯರಾಯ ಅ.

ಜನ್ಮಾರಭ್ಯವು ನಿಮ್ಮ ಗುಣಕರ್ಮಗಳಿಲ್ಲ
ವಿಜಯರಾಯ
ಇನ್ನು ನಾ ವರ್ಣಿಸಲೆಷ್ಟರವನೊ ಗುರು
ವಿಜಯರಾಯ ೧

ದಿವಿಜರ ವೇಷದಿಂದವನಿಯೊಳುದಿಸಿದ್ಯೊ
ವಿಜಯರಾಯ
ದಿವಿಜರಿಂದಲಿ ಪ್ರತಿದಿವಸ ಬಿಡದಲಿದ್ಯೊ
ವಿಜಯರಾಯ ೨

ಭಾಗವತ ಧರ್ಮವಹಿಸಿ ತ್ರಿರಾವರ್ತಿ
ವಿಜಯರಾಯ
ಭಾಗೀರಥಿಯು ಚೆನ್ನಾಗಿ ಸೇವಿಸಿದ್ಯೊ
ವಿಜಯರಾಯ ೩

ಕಾಂಚಿ ಕಾಳ್ಹಸ್ತಿ ಶ್ರೀರಂಗ ಸೇತುಯಾತ್ರೆ
ವಿಜಯರಾಯ
ಪಂಚವಾರವು ಸಂಚರಿಸಿ ಸೇವಿಸಿದ್ಯೆಯ
ವಿಜಯರಾಯ ೪

ಮರಿಯಾದೆಯಿಲ್ಲದೆ ವರಗಿರಿಯಾತ್ರೆಯ
ವಿಜಯರಾಯ
ಪಂಪರಿಕ್ಷೇತ್ರಕೆ ಪೋಗಿ ಪೂಜಿಸಿದ್ಯೆಯ
ವಿಜಯರಾಯ ೫

ಮಹಿಯಲ್ಲಿ ತಿರುಗಿ ಸರ್ವತೀರ್ಥಕ್ಷೇತ್ರದಿ
ವಿಜಯರಾಯ
ವಹಿಸಿದ್ಯೊ ಸತ್ಯವೈಷ್ಣವ ಸಿದ್ಧಾಂತವ
ವಿಜಯರಾಯ ೬

ಗುರೂಪದೇಶಕನಾಗಿ ವ್ಯಾಸ ಕಾಶಿಯಲಿದ್ಯೊ
ವಿಜಯರಾಯ
ದುರ್ಯೋನಿಯಲಿ ಬಂದವಂಶ ಉದ್ಧರಿಸಿದ್ಯೊ
ವಿಜಯರಾಯ ೭

ಸ್ವಚ್ಛವಾಗಿ ಗಂಗಾತೀರ ವಾಸಮಾಡಿ
ವಿಜಯರಾಯ
ಹೆಚ್ಚಾದ ಪರ್ವಣಿಯೊಳು ಮತ್ಸ್ಯೋದರಿ ತೋರ್ದೆ
ವಿಜಯರಾಯ ೮

ತುಂಗಾತೀರದಿ ನಿಂತು ಗಂಗೆ ಪೆಚ್ಚಿಸಿದಿ
ವಿಜಯರಾಯ
ಅಂಗದ ಮುಸುಕಿಲಿ ಪಾಂಡುರಂಗನ ಕಂಡ್ಯೊ
ವಿಜಯರಾಯ ೯

ಮಧ್ವಮತದ ಸಾರಕವನದಿ ರಚಿಸಿದ್ಯೊ
ವಿಜಯರಾಯ
ಅದ್ವೈತ ಸಿದ್ಧಾಂತಾಬ್ಧ ಧ್ವನಿಸಿದ್ಯೊ
ವಿಜಯರಾಯ ೧೦

ಶುದ್ಧ ತತ್ವಸಾರ ಸುಳಾದಿ ಪದಮಾಡಿ
ವಿಜಯರಾಯ
ಹೃದ್ಯದಿ ಧಿಮಿಕೆಂದು ಹರಿಯ ಕುಣಿಸಿದ್ಯೊ
ವಿಜಯರಾಯ ೧೧

ಸದಾಚಾರ ಸಂಪತ್ತು ಮಧುಕರ ವೃತ್ತಿಯು
ವಿಜಯರಾಯ
ಕದಾಸ್ನ ಪುಂಡರಿಯರು ಶಿಷ್ಯ ಜನಸಂಘ
ವಿಜಯರಾಯ ೧೨

ಭಕ್ತರ ಅಪಮೃತ್ಯು ಬಿಡಿಸಿ ಆಯುವನಿತ್ತೆ
ವಿಜಯರಾಯ
ಪ್ರತ್ಯಕ್ಷವಲ್ಲವೆ ಮನವೆ ಇದಕೆ ಸಾಕ್ಷಿ
ವಿಜಯರಾಯ ೧೩

ನಿತ್ಯನ್ನ ಪುತ್ರೋತ್ಸವಗಳು ಭೃತ್ಯರಿಗೆ
ವಿಜಯರಾಯ
ಮತ್ತೆ ಧರ್ಮ ಮುಂಜಿ ಮದುವೆಗಳ ಮಾಡಿಸಿದ್ಯೊ
ವಿಜಯರಾಯ ೧೪

ಭಕ್ತಜನರಿಗೆ ತತ್ವೋಪದೇಶವ ಮಾಡಿ
ವಿಜಯರಾಯ
ಹೃತ್ಕಮಲದಿ ಹರಿಯ ನೃತ್ಯವ ಮಾಡಿಸಿದೆ
ವಿಜಯರಾಯ ೧೫

ಎಲ್ಲರಲ್ಲಿ ಸಿರಿನಲ್ಲನ ಅಂಶವ
ವಿಜಯರಾಯ
ನಿಲ್ಲಿಸಿದೆಯೊ ನಿನ್ನ ಬಗೆಯ ಬಲ್ಲವರಾರೊ
ವಿಜಯರಾಯ ೧೬

ಬಲ್ಲಿದ ನೀನೊಂದುರೂಪದಿ ಎನ್ನಲ್ಲಿ
ವಿಜಯರಾಯ
ನಿಲ್ಲಿಸಿದ್ದಕೆ ಎಲ್ಲಜನರು ಓಲೈಸೋರು
ವಿಜಯರಾಯ ೧೭

ನಿಮ್ಮ ಪುಣ್ಯದ ಶೇಷವಿನ್ನು ಉಂಬೆವೊ ನಾವು
ವಿಜಯರಾಯ
ಎಮ್ಮ ಸಾಮರ್ಥ್ಯವು ನಿಮ್ಮದೆಂದಿಗು
ವಿಜಯರಾಯ ೧೮

ಎನ್ನಿಂದ ಆಗೊ ಸಾಧನವೆಲ್ಲ ನಿನ್ನದೊ
ವಿಜಯರಾಯ
ಎನ್ನ ಪೊಂದಿಹರೆಲ್ಲ ನಿನ್ನ ದಾಸರೊ ಗುರು
ವಿಜಯರಾಯ ೧೯

ಈ ಯುಗದಿ ಸಾಧನವೆಂಬುದು ಕಾಣೆ
ವಿಜಯರಾಯ
ನೋಗಿ ನಿನ್ನವರಿಗೆ ಬೇಗ ಒದಗುವುದೊ
ವಿಜಯರಾಯ ೨೦
ಗುರು ನಿನ್ನ ಕರುಣ ಕವಚ ತೊಟ್ಟ ಭಕುತರ್ಗೆ
ವಿಜಯರಾಯ
ಸಿರಿವರ ಗೋಪಾಲವಿಠಲ ಕೈಪಿಡಿವನೊ
ವಿಜಯರಾಯ ೨೧

೬೮ ರಾಗ ಮಧ್ಯಮಾವತಿ ಆದಿತಾಳ

ರಥವನೇರಿದ ರಾಘವೇಂದ್ರ ರಾಯಾ
ಗುಣಸಾಂದ್ರ ಪ.
ಸತುವ ಮಾರ್ಗದಿ ಸಂತತ ಸೇವಿಪರಿಗೆ
ಹಿತದಿಂದಲಿ ಮನೋರಥವ ಬೀರುವೆನೆಂದು ಅ.

ಚತುರದಿಕ್ಕು ವಿದಿಕ್ಕುಗಳಲ್ಲಿ
ಸ್ಮರಿಸುವ ಜನರಲ್ಲಿ
ಮಿತಿಯಿಲ್ಲದೆ ಬಂದು ಓಲೈಸುತಲಿ
ವರವ ಬೇಡುತಲಿ
ತುತಿಸುತ ಪರಿಪರಿ ನತರಾಗಿಹರಿಗೆ
ಗತಿ ನೀಡದೆ ಸರ್ವಥ ನಾ ಬಿಡೆನೆಂದು ೧

ಅತುಳ ಮಹಿಮನಾ ದಿನದಲ್ಲಿ
ದಿತಿಜ ವಂಶದಲಿ
ಉತುಪತಿಯಾಗಿ ಉಚಿತದಲ್ಲಿ
ಉತ್ತಮ ಮತಿಯಲ್ಲಿ
ಅತಿಶಯವಿರುತಿರೆ ಪಿತನ ಬಾಧೆಗೆ ಮ
ನ್ಮಥ ಪಿತನೊಲಿಸಿದ ಜೆತ ಕರುಣದಲಿ ೨

ಪ್ರಥಮ ಪ್ರಹ್ಲಾದ ವ್ಯಾಸಮುನಿಯೆ
ರಾಘವೇಂದ್ರ ಯತಿಯೆ
ಪತಿತೋದ್ಧಾರಿಯೆ ಪಾವನ ಕಾಯಿಯೆ
ಕೈ ಮುಗಿವೆನು ಧೊರೆಯೆ
ಕ್ಷಿತಿಯೊಳು ಗೋಪಾಲವಿಠಲನ ನೆನೆನೆನೆ
ಯುತ ಮಂತ್ರಾಲಯದೊಳು ಶುಭವೀಯುತ ೩

೭೯ ರಾಗ ಮೋಹನ ಆದಿತಾಳ

ಬಾರಯ್ಯ ಬಾಬಾ ಭಕುತರ ಪ್ರಿಯ
ಶ್ರೀನಿವಾಸರಾಯ
ಮಾರಜನಕ ಮುಕುತರೊಡೆಯ
ದೇವಯ್ಯ ಜೀಯ ಪ.

ವಾರಿಜಾಲಯಪತೆ ವಾರಿಜನಾಭನೆ
ವಾರಿಜಭವಪಿತ ವಾರಿಜನೇತ್ರನೆ
ವಾರಿಜಮಿತ್ರ ಅಪಾರ ಪ್ರಭಾವನೆ
ವಾರಿಜಜಾಂಡದ ಕಾರಣ ಧೊರೆಯೆ ಅ.

ಸ್ಯಂದನವೇರಿ ಬಪ್ಪರಂಗ, ದೇವೋತ್ತುಂಗ
ನಂದನಂದನ ಅರಿಮದ ಭಂಗ, ಕಾರುಣ್ಯಾಪಾಂಗ
ಸಿಂಧು ಶಯನ ಸುಂದರಾಂಗ, ಹೇ ನಾರಸಿಂಗ
ಕಂದ ವಿರಿಂಚಿಯು ನಂದಿವಾಹನ ಅಮ
ರೇಂದ್ರ ಸನಕಸನಂದನಾದಿ ಮುನಿ
ವೃಂದ ಬಂದು ನಿಂದು ಧಿಂಧಿಂ ಧಿಮಿಕೆಂದು
ನಿಂಪಾಡಲು ಆನಂದದಿ ಮನಕೆ ೧

ಜಗಜ್ಜನ್ಮಾದಿಕರ್ತ ಗೋವಿಂದ, ಉದರದಿ ಲೋಕ
ಲಘುವಾಗಿ ಧರಿಸಿದ ಮುಕುಂದ, ಬಕ್ತರ ಮನಕೆ
ಝುಗಝುಗಿಸುತ ಪೊಳೆವಾನಂದ, ನಿಗಮಾವಳಿಯಿಂದ

ಅಗಣಿತ ಮುನಿಗಣ ನಗ ಖಗಮೃಗ ಶಶಿ
ಗಗನಮಣ್ಯಾದ್ಯರು ಸೊಗಸಾಗಿ ಬಗೆ ಬಗೆ
ಪೊಗಳುತಲೀ ಬೇಗ ಚಿಗಿ ಚಿಗಿದಾಡಲು
ಮುಗುಳು ನಗೆಯು ಮಹೋರಗ ಗಿರಿವಾಸ ೨

ತಡಮಾಡ ಬೇಡವೊ ಹೇ ನಲ್ಲ, ವಾಕು ಲಾಲಿಸು, ಎ
ನ್ನೊಡೆಯ ಶ್ರೀ ಗೋಪಾಲವಿಠ್ಠಲ, ದೇವ ಪರಾಕು
ಅಡಿಗಳನಿಡು ಭಕ್ತವತ್ಸಲ, ಶ್ರೀ ಲಕುಮಿನಲ್ಲ
ಮಡುವಿನೊಳಗೆ ಗಜ ಮೊರೆಯಿಡಲಾಕ್ಷಣ
ಮಡದಿಗೆ ಹೇಳದೆ ದಡದಡನೇ ಬಂದು
ಹಿಡಿದು ನಕ್ರನ ಬಾಯ್ಕಡಿದು ಬಿಡಿಸಿದನೆ
ಸಡಗರದಲಿ ರಮೆ ಪೊಡವಿಯೊಡನೆ ಕೂಡಿ ೩

೭೨ ರಾಗ ಆರಭಿ ಆದಿತಾಳ

ಆಂಜನೇಯನೆ ಪಾಲಿಸೊ, ನಿನ್ನ ಶ್ರೀ ಪಾದ
ಕಂಜ ಮನದಲ್ಲಿ ತೋರಿಸೋ ಪ.

ಸಂಜೀವಧರಣ ಪ್ರಭಂಜನ ತನಯ ಧ
ನಂಜಯ ಕೇತನ ಮಂಜುಳ ಮೂರುತಿ ಅ.

ರಾಮ ಪದಾಂಬುಜ ಭೃಂಗ, ಸಕಲ ಸದ್ಗುಣ
ಧಾಮ ಸಜ್ಜನಾಂತರಂಗ
ಭೂಮಿಸುತೆಯ ಪರಿಣಾಮ ತಿಳಿದು ತ್ರಿ
ರಾಮ ಮುಂದು ಖಳಸೈನ್ಯವ ಭಂಜಿಸಿದ ನಿ
ಸ್ಸೀಮ, ಬಲಧಾಮ, ರಿಪುಭೀಮ
ಋಜು ಸಾರ್ವಭೌಮಾ ೧

ಲಕ್ಷ್ಮಣ ಪ್ರಾಣಾಧಾರ, ದಶಕಂಧರ
ವಕ್ಷ ಮರ್ದನತಿಶೂರ

೭೪ ರಾಗ ಮೋಹನ ಝಂಪೆತಾಳ

ವಿಷಯ ಸಂಗದಲಿಂದ ಕುಶಲವನು ಬಯಸಿದರೆ
ಹಸನಾಗಿ ತೋರುವುದೆ ನಿನಗೆ ಪ.

ಅಸಮ ಜ್ಞಾನಿಗಳ ಧಿಯು ಮಸುಳಿ ಮರುಳಾಗುವುದು
ಮಶಕ ನಿನಗಾವ ಸೆಲೆಯೋ ಮನುಜ ಅ.

ಭರತರಾಯನ ನೋಡು, ಹರಿಣ ಕುಣಪನು ಪೋಗಿ
ಒರಲೊರಲಿ ಪ್ರಾಣಬಿಡನೆ
ಮರಳಿ ಎರಳೆಯ ಜನ್ಮವನುಭವಿಸಿ ಸಂಗವನು
ಥರವಲ್ಲವೆಂದು ಮೊರೆಯಿಡನೇ, ಮನುಜ ೧

ಮಹೌಸಿ ವಿಶ್ವಾಮಿತ್ರ ತಾನು ಊರ್ವಶಿ ಕೂಡಿ
ಶ್ವಾನನಾಗುತ ಪೋದನೋ
ಏನೆಂಬೆ ದೇಹದಲಿ, ಹೀನತ್ವವೈದಿ ನಿ
ತ್ರಾಣನಾದನು ನೋಡೆಲೋ ಮನುಜ ೨

ವಿಪುಳ ಮತಿಯಾದ ಸೌಭರಿಯು ದೃಢಮನಸಿನಲಿ
ತಪವಮಾಡುತ ಕುಳ್ಳಿರೆ
ಶಫರ ಶಫರಿಗಳ ಸಂಯೋಗವನು ಕಂಡು ಮನ
ಚಪಲವಾಯಿತು ನೋಡೆಲೋ ಮನುಜ ೩

ಲೇಸಾದ ಕುಲದಲ್ಲಿ ಸಂಜನಿಸಿದಜಮಿಳನು
ದಾಸಿ ಸಂಗವ ಮಾಡಿದ
ದಾಶರಾಯನ ಮಗಳ ಪರಮ ಋಷಿಯಾದ ಪ
ರಾಶರನು ಕಂಡು ಮನಗೆಟ್ಟ, ಮನುಜ ೪

ಅಂದಣವ ನೇರಿದ ನಹುಷರಾಯನ ನೋಡು
ಇಂದ್ರ ರಾಣಿಯನು ಬಯಸಿ
ಮುಂದ ಅಜಗರನಾಗಿ ಬಂದ ಭೂಮಿಯಲಿ ಅದ
ರಿಂದ ಗೆಲಲೊಶವಲ್ಲವೋ, ಮನುಜ ೫

ವಿಷಯದಲಿ ಮನಸನ್ನಿಕರ್ಷವಾದರೆ ನಿನ್ನ
ವಶಕೆ ಬರಲರಿಯದಯ್ಯ
ಎಸೆವ ಶ್ರುತಿಸ್ಮೃತಿಯೆಂಬ ನಿಶಾಣದಲಿ ಮಸೆ ಮಸೆದು
ವಶವಮಾಡಿಕೋ ಬಿಡದಲೇ, ಮನುಜ ೭

ವಿವಿಧ ಸಾಂಸಾರಿಕ ದುಃಖ ದರುಶನವಾಗೆ
ಶ್ರವಣೀಯ ಶಾಸ್ತ್ರಂಗಳ
ಹವಣವರಿತು ಜ್ಞಾನ ದ್ರವಿಣಗಲಿ ಕೇಳಿಕೋ
ಭವಣೆ ದೂರಾಗುವದೋ, ಮನುಜ ೭

ಈಷಣತ್ರಯ ನಿನಗೆ ಮೋಸಗೊಳಿಸಿ ಕಡೆಗೆ
ನಾಶವಾಗುವುದು ಕಾಣೋ
ವಾಸುದೇವನ ಪರಮದಾಸರ ಕರುಣವನು
ಲೇಸಾಗಿ ಪೊಂದಿ ಸುಖಿಸೋ, ಮನುಜ ೮

ಕ್ರಿಮಿಭಸ್ಮ ಮಲವಾಗಿ ಪೋಪದೇಹಕೆ ಬಹಳ
ಮಮತೆಯನು ಕೊಡಲಿ ಬೇಡ
ಕಮಲನಾಭನ ಪಾದ ಕಮಲವನು ಭಜಿಸಿ ಭವ
ಶಮಲಗಳ ಕಳೆ ಕಂಡೆಯಾ, ಮನುಜ ೯

ಇಂತು ಮಹಾಂತ ದೃಷ್ಟಾಂತ ತೋರಿದೆ ನಿನಗೆ
ಭ್ರಾಂತಿ ಜ್ಞಾನವ ಕಳೆಯಲು
ಶಾಂತನಾಗಿರು ವಿಷಯ ಕಾಂತಾರದೊಳು ಬಿದ್ದು
ಭ್ರಾಂತನಾಗಲಿ ಬೇಡವೋ, ಮನುಜ ೧೦

ದ್ರವ್ಯ ಕಾರಕಕ್ರಿಯ ಭ್ರಮವೆಂಬ ಭ್ರಮಣದಲಿ
ದುರ್ವಿಷಯಧಲಿ ಚರಿಸದೆ
ಶರ್ವಪಿತ ಪ್ರಿಯ ಶ್ರೀ ಗೋಪಾಲವಿಠಲನ
ಗುರ್ವಧಿಷ್ಠಾನದಲಿ ಭಜಿಸೋ, ಪ್ರಾಣಿ ೧೧

೭೫ ರಾಗ : ಸೌರಾಷ್ಟ್ರ ಝಂಪೆತಾಳ

ನಿನ್ನ ನಂಬಿದ ನರಗೆ ಅನ್ಯರಾಶ್ರಯ-ವೇಕೆ
ಚನ್ನ ಗುರುವಿಜಯರಾಯ । ಪ.

ಘನ್ನ ಭವದೊಳು ಸಿಲುಕಿ ಬನ್ನ ಬಡುವೆನು ಜೀಯ
ಇನ್ನು ಕಡೆಹಾಕೊ ಈಗ-ಬೇಗ ಅ.

ಸಪ್ತದ್ವೀಪಾಧಿಪನ ಪುತ್ರನೊಬ್ಬನು ಪರರ
ಭೃತ್ಯನಾಗುವುದುಚಿತವೆ
ಮತ್ತೆ ಸುರಧೇನುವಿನ ಹತ್ತಿಲಿರುವವ ನಿನ್ಯ
ಹಸುತ್ತ ಬಳಲುವುದುಚಿತವೆ
ಒತ್ತಿ ಸುರನದಿ ನರನ ಸುತ್ತ ಹರಿಯಲು ನೀರಿ
ಗಾರ್ತನಾಗುವುದುಚಿತವೆ
ನಿತ್ಯಸುಖದಾರಿ ವಿಚಿತ್ರದಿ ತೋರಿರೆ
ಹಸ್ತವ ಪರರಿಗೊಡ್ಡುವುದುಚಿತವೆ, ಗುರುವೆ ೧

ಕ್ಷೀರವಾರಿಧಿ ಸೇರಿ ನೀರುಮಜ್ಜಿಗೆಗಾಗಿ
ಚೀರಿ ಬಳಲುವುದುಚಿತವೆ
ನೂರಾರು ವಸನದ ಹೇರು ಮನೆಯೊಳಗಿರಲು
ಕೋರಿಯುಡುವು-ದುಚಿತವೆ
ಸಾರಿಯಲಿ ಅಮೃತಾನ್ನ ಸೂರೆಗೊಳಲೆಂಜಲ
ಮಾರು ಹುಡುಕುವುದುಚಿತವೆ
ವಾರವಾರಕೆ ಹರಿಯ ತೋರುವವನ ಬಿಟ್ಟು
ಕ್ರೂರರ ಸೇವಿಪದಾರಿಯುಚಿತವೆ, ಗುರುವೆ ೨

ಸಾಕು ಸಲಹೆಂದತಿ ವ್ಯಾಕುಲದಿ ಬಂದವನ
ನೂಕಿಬಿಡುವುದುಚಿತವೆ
ಬೇಕಾದ ವರಗಳನು ಲೋಕರಿಗಿತ್ತೆನ್ನ
ಕಾಕು ಮಾಡುವುದುಚಿತವೆ

ಏಕ ಬುದ್ಧಿಯನಿತ್ತು ಶೋಕವಮಾಡದೆ ಮನ
ನೇಕ ಮಾಡುವುದುಚಿತವೆ
ಶ್ರೀಕಾಂತ ವೇಣುಗೋಪಾಲ ವಿಠ್ಠಲ ನಿನ್ನ
ವಾಕು ಮನ್ನಿಸೆ ನಾ ಕೆಡುವುದುಚಿತವೆ, ಗುರುವೆ ೩

## ಶ್ರೀ ತುಳಸೀ ಮಹಾತ್ಮೆಯು

೭೭ ವಾರ್ಧಿಕಷಟ್ಪದಿ ಉದಯರಾಗ

ಶ್ರೀತುಳಸಿಯನು ಸೇವಿಸಿ ಪ.

ಶ್ರೀ ತುಳಸಿಯನು ಸತತ ಸೇವಿಸುವ ಸುಜನರಿಗೆ
ಯಾತನೆಗಳಿಲ್ಲ ಯಮದೂತರಾಭಯವಿಲ್ಲ
ಭೂತ ಜನುಮಗಳಿಲ್ಲ ಪಾತಜನ ಮತಜನರು ಪ್ರೀತಿಯಿಂದಿದನಾಲಿಸಿ ಅ.

ಜಲಜನಾಭನು ದೇವ ದಾನವರ ಸಹಿತದಲಿ
ಜಲಧಿಯನು ಮಥಿಸುತಿರೆ ಅಮೃತ ಪೂರಿತವಾದ
ಕಲಶವನು ಕರದಲ್ಲಿ ಧರಿಸಿ ಬರಲಾಕ್ಷಣದಿ ಜಲಸುರಿದವಕ್ಷಿಯಲ್ಲಿ
ಥಳಥಳಿಸುತಿಹ ಬಾಷ್ಪ ಕಲಶದಲಿ ತಾ ಸೇರಿ
ನೆಲಕೆ ಬಿಂದುಗಳುದುರಿ ತುಳಸಿರೂಪದಿ ಜನಿಸೆ
ತಲೆದೂಗಿದರು ಅಮರಗಣವೆಲ್ಲ ಹರಿಮಹಿಮೆ ತಿಳಿಯಲೊಶವಲ್ಲವೆಂದು ೧

ನದಿಜನಕ ತಾನು ನಾರಿಯ ಮದುವೆಯನುಗೈದು
ತ್ರಿದಶರಿಂದಲಿ ಸ್ತೋತ್ರ ಕೈಗೊಳುತಲೊಪ್ಪುತಿರೆ
ವಿಧ ಪೇಳಲಳವಲ್ಲ ವಿಧಿ ಶಿವಾದಿಗಳಿಂದ ವಿಬುಧ ಮುನಿಗಣಗಳಿಂದ
ಪದುಮನಾಭನೆ ಎನ್ನ ಕರಪಿಡಿದ ತರುವಾಯ
ಒದಗಲೆನ್ನಯ ಕೀರ್ತಿ ವಿಸ್ತಾರಗದೊಳಗೆಂದು
ಚದುರೆ ಬಿನ್ನೈಸಲ್ಕೆ ಆ ವಚನವನು ಕೇಳಿ ಮುದದಿಂದ ನುಡಿದನಾಗ ೨

ಖಿಯು ನೀಕೇಳುವುದು ವರವೀವೆ ನಿನಗೆ ಈ
ಕಲ ದೇವತೆಗಳೂ ಸರ್ವ ನದನದಿಗಳೂ
ಕಳಂಕ ಮುನಿಗಳೂ ಅ ಮುಕುತ ಜನರಿಂದ ಯುಕುತವಾಗಿದ್ದು ಅಲ್ಲಿ
ಕಟದಲಿ ಸೇವೆಯನು ಕೈಕೊಳುತ ನಿಂದಿರುವೆ
ಕುಟಿಲಾತ್ಮಕರಾಗಿ ನಿನ್ನ ಸೇವಿಪ ನರರ
ಖಿಳಾಘ ರಾಸಿಯನು ಕಳೆಯುತವರ್ಗನು ಎನ್ನಭಕುತರೊಳು ಎಣಿಪೆನೆಂದ ೩

ನ್ನ ಪೂಜೆಯನು ಏನೇನು ಬಗೆ ದ್ರವ್ಯದಲಿ
ಸ್ನಿಸುತ ಮಾಡಿದರು ಫಲವೀಯೆನವರಿಂಗೆ
ನ್ನ ಸಹಿತದಿ ಸರ್ವ ಬಗೆಯಲ್ಲಿ ಪೂಜಿಸಲು ಮುನ್ನ ಕೈಕೊಂಬೆ ನಾನು
ನ್ನ ಈ ಬಗೆಯಲ್ಲಿ ಇದಕೆ ಸಂಶಯವಿಲ್ಲ
ನ್ಯಥಾವಾಗಲರಿಯದುವರವ್ರ ಶತಸಿದ್ಧ
ನ್ನತಲಿ ತಿಳಿಯುವುದು ಸರ್ವಸಜ್ಜನರೆಂದು ಘನ್ನಮಹಿಮನು ನುಡಿದನು ೪

ವ ಮನೆಯಲಿ ನಿನ್ನ ಚಿನ್ಹೆ ತಾನಿಲ್ಲದಿರೆ
ವ ಜನವಾದರೇ ನಿನ್ನ ಪೂಜಿಸದಲಿರೆ
ಒಂದು ಕ್ಷಣವಿಲ್ಲನವನ ಮನೆತನುವಿನೊಳು ನೋವ ಬಡಿಸುವೆ ವಿಶೇಷ
ವನೆಯು ನಿನ್ನ ಸತ್ಕೀರ್ತಿ ಕೊಂಡಾಡಿದವ
ವೆ ಕೈವಲ್ಯವನು ಇಹಲೋಕದೊಳಗವನ
ವಲಾಧಿಕವಾಗಿ ಕಾಪಾಡುವೆನು ಸಕಲ ದೇವಮುನಿಸಹಿತವೆಂದ ೫

ಂದು ವರವಿತ್ತು ಬಳಿಕಂದಿನಿಂದಲಿ ಸಕಲ
ಂದಿರಾಂಗಣದೊಳಗೆ ಹೊಂದಿ ಲೋಕಂಗಳಲಿ
ಂದದಿಂದಿರುತಿಹಳು ಅಭಿಮಾನಿ ತಾನಾಗಿ ವಂದಿಪರನುದ್ಧರಿಸುತ
ಂದು ದಳವಾದರೆಯು ಭಕುತಿಯಲಿ ಹರಿಚರಣ
ದ್ವಂದ್ವಗಳಿಗರ್ಪಿಸಿದ ನರರಿಗೆಣೆಯಿಲ್ಲ ಭವ
ಂಧಲಂಘಿಸಿ ದೇವವೃಂದದೊಳು ಸೇರಿ ಸುಖವೊಂದಿ ನಲಿದಾಡುತಿಹರು ೬

ಧರೆಯೊಳಗೆ ಒಬ್ಬ ಗಂಡಿಕೆಯೆಂಬ ವೇಶ್ಯೆ ತಾ
ಪರಿಮಿತವ ವಿಹಾರದಲಿ ಚರಿಸುತಿರೆ ಒಂದು ದಿನ
ಪುರುಷರೊಬ್ಬರು ಬಾರದಿರಲು ಸಿರಿಹರಿ ತಾನು ವರವೃದ್ಧ ರೂಪತಾಳಿ
ಥರಥರನೆ ನಡುಗುತ್ತ ನಿಂದಿರಲು ದ್ವಾರದಲಿ
ಪರಿಚರ್ಯ ಮಾಡುವರು ಪೆಳೆ ಕರೆಯೆಂದಟ್ಟಿ
ಪುರುಷನನು ಕುಳ್ಳಿರಿಸಿ ಸಂತೋಷ ಮಾಡಿದಳು ಹರಿಮಹಿಮೆಯನು
ಸ್ಮರಿಸುತ ೭

ಶರಗಿನೊಳಗಿದ್ದ ಕತದ್ರವ್ಯವಾತಗೆ ಕೊಟ್ಟು
ವರಶಯ್ಯೆಯಲಿ ತಾನು ಪವಳಿಸಿದ ಸುಮ್ಮನೆಯೆ
ಜರೆಯು ಚಿಂತೆಯು ಮಾಡಿ ಕೆಡಿಸಲಾಗೃಹವನ್ನು ಸ್ಮರಿಸಲತಿದೂರವಾಗಿ
ಅರಿಯುತಲಿದೆಲ್ಲವನಸಹ್ಯವನು ಪಡದಲೇ
ಇರುಳು ಈತಗೆ ಎನ್ನ ತನುವೊಪ್ಪಿಸಿಹೆನಾಗಿ
ಪರಿಯದೆನಗೀಋಣವು ಎಂದು ನಿಶ್ಚಯ ಮಾಡಿ ಪರಿಶುದ್ಧಿಯನು ಗೈದಳು ೮

ಸುದತಿಯಳ ಮನದೃಢವ ನೋಡಬೇಕೆನುತ ಹರಿ
ಯೊದರಿ ಕೈಕಾಲುಗಳ ಮೃತಿಯೈದ ಪರಿತೋರ
ಲದಕಂಡು ಆ ನಾರಿ ಯೋಚಿಸುತ ಸಾಗಮನ ವಿಧಮಾಡಿದಳು ಹರುಷದಿ
ಮುದದಿಂದ ತನ್ನ ಮನೆಯೊಳಗಿದ್ದ ಬದುಕುಧನ
ವೊದಗಿ ವಿಪ್ರರಿಗಿತ್ತು ತ್ರಿದಶ ಮೋಹನಕರದಿ
ಹುದುಗಿ ನಡೆದಳುಚಿತೆಗೆ ಹೃದಯನಿರ್ಮಲದಿ ಪರಪದಕೆ ಗತಿಯನ್ನು ಸ್ಮರಿಸಿ ೯

ಸಿದ್ಧವಾಗಲು ಪತನ ಸಮಯದಲಿ ಸಾಗಮದಿ
ಪೊ[illegible] ಚೇಷ್ಟೆಯನು ದೇಹವಿ ತೋರಿವದನದಲಿ
ಗದ್ಗದಾ ಮಾತುಗಳ ನುಡಿಯೆ ಸರ್ವರು ಕೇಳಿ ಶುಭಾಶ್ಚರ್ಯಗಳಹುದೆನ್ನುತ
ಇದ[illegible] ಸತ್ಯೆಸೆ ಬಹಳ ಸಂತೋಷದಲಿ
ಹೃದ[illegible]ನರಳಿ ಕೊಂಡಾಡಿದಳು ಪುರುಷನ್ನ
ಮುದ [illegible] ಫಲಿಸಿತೆಂದೆನುತಲಾತನ ಸಹಿತ ಸದ್ಮ ಸೇರಿದಳು ಬಂದು ೧೦

ಬಲು ವಿಧದಿ ಪೂಜೆಯನು ಮಾಡುತಾತಗೆ ತನ್ನ
ಸುಲಲಿತಾಂಗವ ಸಮರ್ಪಿಸಿ ತನ್ನ ಕುಲಕೋಟಿ
ಗಳ ಸಹಿತವೀಜಗದಿ ಕೀರ್ತಿವಂತಳು ಮತ್ತೆ ಬಲು ಪುಣ್ಯವಂತಳೆಂದು
ಲಲನೆ ಕೈಮುಗಿದು ನಿಂದಿರಲಾಗ ಹರಿತಾನು
ಸುಲಭನಿಂದಲಿ ತನ್ನ ನಿಜರೂಪವನು ತೋರಿ
ಹಲವು ಬಗೆಯಲಿ ನಿನ್ನ ಭಕ್ತಿಗೆ ತೃಪ್ತನಾಗಿ ಒಲಿದೆ ವರ ಬೇಡೆಂದನು ೧೧

ಧನ್ಯಳಾದೆನು ನಾನು ನಿನ್ನ ಕಾಣುತ ಮತ್ತೆ
ಅನ್ಯವರವೇಕೆನಗೆ ಸಿರಿಯರಸ ಸುಖಪೂರ್ಣ
ನಿನ್ನಾಜ್ಞೆ ಮೀರಲಳವಲ್ಲ ವಳಿತೆಲೆ ದೇವ ಮನ್ನಿಸುವುದೀ ಮಾತನು
ವನ್ನಜೋದ್ಭವ ಶಂಭು ನಿನ್ನಿಂದ ಸಹಿತ ಬಂ
ದೆನ್ನ ಉದರದಿ ಜನಿಸಬೇಕೆಂದು ಪ್ರಾರ್ಥಿಸಲು
ಪನ್ನಂಗಶಯನ ಕೇಳುತಲಾಗಲಾ ವಚನವನ್ನು ಪತಿಕರಿಸಿ ನುಡಿದ ೧೨

ಮುಗುಳು ನಗೆಯಿಂದಲ್ಲಿ ಮುಂಭಾಗದೊಳಗಿದ್ದ
ಸುಗುಣೆಯನು ನೋಡುತೀಬಗೆಯಲ್ಲಿ ನೀನಿರಲು
ಸೊಗಯಿಸದು ಆದರಿಂದ ವಿಗಡ ದೇಹವ ಬಿಟ್ಟು ಮುಗುಳೆ ನೀನದಿಯಾಗಲು
ಗಗನ ಕೇಶನು ಬ್ರಹ್ಮಸಹಿತ ನಿನ್ನುದರದಲಿ
ಜಗದೊಳಗೆ ಉದುಭವಿಸಿ ಬಗೆ ಬಗೆಯಲೀ ನಿನ್ನ
ಮಿಗೆ ಕೀರ್ತಿ ವಿಸ್ತರಿಪೆ ನಗಣಿತಸುಕಾಲದಲಿ ಮೃಗನೇತ್ರೆ ಕೇಳೆಂದನು ೧೩

ಪರಮ ನಿರ್ಮಲವಾದ ಗಂಡಕೀ ನಾಮದಲಿ
ಸರಿಚ್ಛ್ರೇಷ್ಠವೆಂದೆನಿಸೆ ತ್ವರಿತ ತಾನದರೊಳಗೆ
ಕರುಣದಿಂದಲಿ ಉಭಯರಿಂದ ಕೂಡಿಯೆ ಹರಿಯು ಕುರುಹು ಮಾಡಿ
ಟ್ಟುಕೊಂಡ
ಸಿರಿಯು ಸಾಲಿಗ್ರಾಮ ಸ್ವರ್ಣಗರ್ಭವು ಮತ್ತೆ
ಅರವುದ್ಯೆ ಶಿವನಾಭಿಯೆನಿಪ ಪೆಸರುಗಳುಳ್ಳ
ಪರಿಯನ್ನು ತಿಳಿದು ಪೂಜೆಯ ಮಾಡುತಿಹ ನರಗ ಸರಿಯಿಲ್ಲವಾವಲ್ಲಿಯು ೧೪

ದನುಜ ಜಲಧರ ತಾನು ಘನವಾಗಿ ತಪಗೈದು
ವನಜ ಪೀಠನ ತೃಪ್ತಿಯನು ಪಡಿಸಿ ಬಲು ವಿಧದಿ
ತನಗೆ ಮಾರಕರೊಬ್ಬರಾಗದಿರಲೆಂದೆನುತ ಲನುನಯದಿ ಕೇಳಲಾಗಿ
ವನಜ ಸಂಭವನೊಲಿದು ವರವಿತ್ತ ನಾಖಳಗೆ
ತನುವಿನರ್ಧಾಳ ದೋಷವಿನಹ ಮತ್ತೊಂದರಿಂ
ಜನುಮಕ್ಕೆ ಎಂದೆಂದು ಹಾನಿತಟ್ಟದು ಪೋಗು ಸನುಮತದಲಿರು
ಎಂದನು ೧೫

ವರಪಡೆದು ಆ ಖಳನು ಇರುತಿದ್ದು ಕ್ರಮದಿಂದ
ಸುರಮನುಜ ಮುನಿಗಳಿಗೆ ಪರಮ ಬಾಧೆಗಳ ವಿ
ಸ್ತರವಾಗಿ ಕೊಡುತಿರಲು ಅಮರಗಣವೆಲ್ಲವಾ ಸರಸಿಜಾಸನಗೊರೆಯಲು
ಸರುವರಿಂದಲಿ ಕೂಡಿ ಹರಿಯತಾಣಕೆ ಪೋಗಿ
ಮೊರೆಯಿಡಲು ಕೇಳಿ ಕೇಶವನಿವಗೆ ತಕ್ಕಂಥ
ಪರಿಯ ಚಿಂತಿಸಿ ಇಹನು ಕಾಲಬಂದಿದೆ ಈಗ ಹರುಷದಲಿ ಪೋಗಿರೆಂದ ೧೬

ಇಂದಿರಾರಮಣ ಯದುಬೃಂದದೊಳಗವತರಿಸಿ
ಚಂದಚಂದದಿ ಜಗದ ಮಂದಿಯನು ಮೋಹಿಸುತ
ಮಂದಹಾಸದ ವದನ ಮನ್ಮಥಜನಕ ತಾ ಬಂದು ದನುಜನ್ನ ಸೆಣಸಿ
ಪೊಂದಿ ಯುದ್ಧವಮಾಡಿ ಸಾಗದಿರಲಾಗವನ
ಮಂದಿರಕೆ ತಾಪೋಗಿ ಅವನ ರೂಪವ ಧರಿಸಿ
ವೃಂದಾವನಿಯ ಕೂಡಿ ವ್ರತಭಂಗಮಾಡೆ ಮತ್ತೊಂದು ಪರಿಯಲಿ
ತಿಳಿದಳು ೧೭

ಕಪಟ ವೇಷದವ ನೀನಾವನೋ ಪೇಳುವುದು
ಗುಪಿತ ರೂಪದಲೆನ್ನ ಕೂಡಿದವನೆಂದೆನಲು
ಚಪಲತೆಯ ಮಾತುಗಳ ಪೇಳಿ ಆಮೇಲೆ ನಿಜರೂಪವನೆ ಧರಿಸಿ ನಿಂದ
ಅಪಹಾಸ್ಯವನು ಮಾಡಿ ಎನ್ನ ಮತ ಕೆಡಿಸಿದೈ
ಸುಪತಿಯನು ನೀಗುವೋ ತೆರನ ಮಾಡಿದೆಯಾಗಿ
ಶಪಿಸುವೆನು ನಾ ನಿನ್ನ ಪಾಷಾಣವಾಗೆಂದು ಶಪಥ ಪೂರ್ವಕ ನುಡಿದಳು ೧೮

ಸತಿಯು ಈಪರಿ ನುಡಿದು ನತಳಾಗಿ ಹರಿಸಮ್ಮುಖ
ಸ್ತುತಿಗೈದು ಎನಗೇನು ಗತಿಯೆಂದು ಬಿನ್ನೈಸೆ
ರತಿಪತಿಯ ಪಿತನಾಡಿದತಿ ಹರುಷದಿಂದ ಮನ ಖತಿಯು ದೂರಾಗುವಂತೆ
ಪತಿವ್ರತೆಯೆ ಕೇಳು ನಿನಗತಿಶಯದ ಪದವೀವೆ
ಕ್ಷಿತಿಯೊಳಗೆ ನೀನು ಶ್ರೀ ತುಳಸಿ ಪೆಸರಳು ಆಗಿ
ಮತವಿಹಿತವಾದ ಪೂಜೆಯ ಕೈಸಿಕೊಳ್ಳುತಲಿ ಅತಿಶಯದಲಿರು ಎಂದನು ೧೯

ಈ ವಿಧದಿ ವರಪಿತ್ತು ದೇವ ದೇವೇಶನಿಗೆ
ದೇವಿ ಬಹು ಭಕ್ತಿಯಲಿ ಸಾಷ್ಟಾಂಗವೆರಗುತಲಿ
ದೇವ ಪಥವನು ಸೇರಿ ಸರ್ವ ಸ್ಥಳಂಗಳಲಿ ತಾ ವ್ಯಾಪ್ತಳಾಗಿ ನಿಂದು
ಶ್ರೀ ವಲ್ಲಭನ ದಿವ್ಯ ನಾಮವನು ನೆನೆನೆನೆದು
ಪಾವನವ ಮಾಡುವಳು ತುಳಸಿ ಸಹಿತವಿ ಜಗವ
ಕೋವಿದರು ಇಂತೆರಡು ಭಾವವನು ತಿಳಿದು ಹರಿ ಸೇವೆಮಾಳ್ಪರೆ
ಧನ್ಯರು ೨೦

ಇನಿತು ಬಗೆಯಲಿ ಹರಿಯ ಮಹಮಹಿಮೆ ಕೊಂಡಾಡಿ
ತನುವುಬ್ಬಿ ತುಳಸಿದಳಗಳ ತಂದು ಅರ್ಚಿಸುವ
ಮನುಜರಿಗೆ ಎಣೆಯಿಲ್ಲ ಮಹಿಯೊಳಗೆ ಆವಲ್ಲಿ ಸನುಮತವು ಹರಿಯ ಪುರಕೆ
ಅನಿಮಿಷರು ಅನುದಿನವು ಇವರ ಕರವನು ಪಿಡಿದು
ಘನಭವಾಬ್ಧಿಯಲಿಂದ ಕಡೆಗೆ ತೆಗೆವೆವು ಎನುತ
ಲಿನಗೆ ತನಗೆಂದು ನಲಿ ನಲಿಯುತಿಷ್ಟೈಸುವರು ತೊಲಗದಲೆ ಕೂಡೆ
ಇಹರು ೨೧

ತಾಮಸಾಗ್ರಣಿ ಯುಗದಲೀ ಮಹಾಸಂಸಾರ
ಧೀಮಂತ ಜನರಿಗೆ ಪ್ರೇಮದಿಂ ಹರಿಯಿತ್ತ
ಕಾಮಿಸುವರಿಗೆ ದೇವಸ್ತೋಮ ತಲೆದೂಗುತಲಿ ಭೂಮಿಯಲಿ ಜನನವನ್ನು
ನೇಮವಿದು ಇದರೊಳಗೆ ಅಲ್ಪ ಮಾತ್ರದ ಪುಣ್ಯ
ಪಾ ಮಹಾಫಲವಕ್ಕು ಪಾಪವಲ್ಪಹುದೆಂದು
ಸೀಮಾಧಿಪತಿ ಕಲಿಯುಬಿಟ್ಟ ಪಂತಿಳಿದು ಸುಖಧಾಮಹರಿಯನು
ಭಜಿಪರು ೨೨

ತನುಮನವು ಮನೆಧನವು ಅನಾವೃಷ್ಟಿ ಅತಿವೃಷ್ಟಿ
ಅನಲವಾಯುವು ಮಿಕ್ಕಾದೇನೇನು ಕ್ಲೇಶಗಳು
ಎನಿತೆನಿತು ಬಂದರೂ ತಪವೆನುತಲರ್ಪಿಸುತಲನುಸರಿಸಿ ವಿಷಯಗಳನು
ದಿನದಿನದಿ ನೆನೆನೆನೆದು ತನ್ನೊಳಗೆ ಇಪ್ಪಂಥ
ಅನಿಮಿಷರ ಒಡೆಯನಿಗೆನುತ ಕೊಡುತಾದರದಿ
ಕನಸಿನಾ ತೆರನಂತೆ ಸಂಸಾರವೆಂದೆನುತ ಸನುಮತದಿ ಚರಿಸಬೇಕು ೨೩

ಹೀಗೆ ಸುಖದೊಳಗಿದ್ದು ಹೇಗೆಂದು ಒಬ್ಬರಿಗೆ
ಬಾಗಿ ಬೇಡದೆ ದುಷ್ಟ ಭೋಗಗಳ ಬಯಸದಲೆ
ನಾಗಾರಿವಾಹನನ ಸೇವುದಲಿ ಪೂಜಿಸುತ ಭಾಗವತ ಜನರೊಳಿದ್ದು
ಶ್ರೀ ಗುರುಗಳಲಿ ಸರ್ವ ಪೌರಾಣಗಳ ಕೇಳಿ
ಜಾಗರೂಕತನಾಗಿ ಜಡ ಚೇತನಂಗಳಲಿ
ಭಾಗೀರಥೀಪಿತನ ಪಾದಯುಗ್ಮವ ಸ್ಮರಿಸಿ ನೀಗಿ ಗತಿ ಪಡೆಯಬೇಕು ೨೪

ವಾಣಿಯರಸನ ಪಿಡಿದು ಸ್ಥಾಣ್ವಂತ ಸರ್ವ ಜಗ
ಶ್ರೀನಿವಾಸನ ಕ್ರೀಡೆ ಸ್ಥಾನ ಕೇವಲ ಮಾತ್ರ
ಆ ನಿರ್ಜರರ ಕೂಡೆ ಆಡುತಿಹನನುದಿನವು ಮಾನಿನಿಗೆ ಮುದವೀಯುತ
ಜ್ಞಾನಿಗಳು ಇದ ತಿಳಿದು ಏನಾದರೂ ಹರಿಯ
ಧೀನವೆಂದಿರುತಿಹರು ಸಾನುಕೂಲನು ಸರ್ವ
ಜ್ಞಾನಾಂಬುಸಿಧಿ ವೇಣುಗೋಪಾಲವಿಠ್ಠಲನು ತಾನೊಲಿವ ತವಕದಿಂದ ೨೫



## ೨೨ ವೈರಾಗ್ಯ ಸುಳಾದಿ

ಧ್ರುವತಾಳ

ವೈರಾಗ್ಯ ಮಾರ್ಗಕೇಳು ದಾರಿದ್ರ್ಯ ಮಾರ್ಗಕೇಳು
ಶ್ರೀರಮಣನ ಪಾದವಾರಾಧಿಸುವುದಕ್ಕೆ
ನಾರಿಯು ಧಾರುಣಿಯು ಧನವ ಬಿಟ್ಟರಾಯಿತೆ
ವೈರಾಗ್ಯವಲ್ಲ ಕಂಡ ಧೀರರಿಗೆ
ಶರೀರಕಾಪಾದ ಭಸ್ಮ ಧರಿಸಿಕೊಂಡು
ಚೀರವಸ್ತ್ರವನುಟ್ಟು ತಿರುಗಾಡುತ್ತಿರಲಾಗ
ಆರಾದರೂ ಅವನ ಅವಧೂತನೆಂತೆಂಬು
ಸಾರಿಸಾರಿಗೆ ಇನ್ನು ಕರೆವರೈಯು
ವೈರಾಗ್ಯವೆಂಬುವಂಥ ಮಾರುತೆಯೊಂದಲ್ಲದೆ
ನಾರಾಯಣಗೆ ಇದು ಪ್ರಿಯವಲ್ಲ
ನಾರಿ ಸುತರುಗಳು ಶರೀರ ಸಂಬಂಧಿ
ಗರು ಎಂತೆಂದಿರಬೇಕು
ನೀರಿನೊಳಗೆ ಇನ್ನು ಕಮಲವು ಇದ್ದಂತೆ
ಕಾರಣವಾಗಿ ಕಾರ್ಯವಿಲ್ಲದಿರಲಿಬೇಕು
ಮಾರಜನಕ ನಮ್ಮ ಗೋಪಾಲ್ಲವಿಠ್ಠಲನು
ತೋರಿಕೊಟ್ಟ ವೈರಾಗ್ಯವನ್ನು ತೋರುವೆನು ೧

ಮಠ್ಯತಾಳ

ಸ್ವಯೋಗ್ಯತೆಯೊಳಗೆ ಆಯುತವಾದದ್ದು
ನೋಯದೆ ಉಣುವದೆ ನ್ಯಾಯದ ವೈರಾಗ್ಯ
ಆಯಾಸ ಪಡದೆ ಪರರ ಶ್ರೇಯಸ್ಸು ನೋಡಿ
ಶ್ರೀಯರಸ ನಿತ್ತನೆಂಬುದೆ ವೈರಾಗ್ಯ
ನೇಹದಿ ಹರಿಯಿತ್ತ ಕರ್ತೃತ್ವವು ಎನಗೆ

ನೀಯಲ್ಲದೆ ಎನ್ನಿಂದಾಗದೆಂತಿಪ್ಪುದೆ
ನ್ಯಾಯದ ವೈರಾಗ್ಯ
ಮಾಯಾ ರಹಿತ ದೇವ ಗೋಪಾಲವಿಠಲನ್ನ
ಪ್ರಿಯದೀನೆಚ್ಚಿ ಅನ್ಯಕೆರಗದಿಪ್ಪುದೆ ವೈರಾಗ್ಯ ೨

ತ್ರಿಪುಟತಾಳ

ಧನ ಪರಿತ್ಯಾಗವನು ಮಾಡಿದಡಾಯಿತು
ಘನವಾದ ವೈರಾಗ್ಯವಲ್ಲ ನೋಡಾ
ಧನವ ಬಿಟ್ಟಿರವೆ ದನಗಳು ಅನುದಿನ
ಘನವೇನೊ ಇವಗೆ ಅವಕ್ಕೆ ನೋಡಾ
ಜನಮನೆ ಬಿಟ್ಟೇಕಾಂತದಲಿ ಕೂಡಲಾಯಿತೆ
ಜನವ ಮನೆಯ ಬಿಟ್ಟಿರದೆ ಅನುಗಾಲ ಗೂಬೆಯು
ಘನವೆಂದು ಕರೆವರೆ ಜ್ಞಾನಿಗಳು
ತನುಮನದಭಿಮಾನವನು ಬಿಟ್ಟಡಾಯಿತೆ
ಘನವಾದ ವೈರಾಗ್ಯವಲ್ಲ ನೋಡಾ
ತನುಮನದಭಿಮಾನವನು ಬಿಟ್ಟು ಕುನ್ನಿ ತಾ
ಮನೆ ಮನೆ ಚರಿಸದೆ ಅನುಗಾಲವು
ಘನಮಹಿಮ ಚೆಲ್ವ ಗೋಪಾಲ ವಿಠ್ಠಲನ
*ನೆನೆದು ಸಕಲ ಸುಖವುಣುವುದೆ ವೈರಾಗ್ಯ ೩

ಅಟತಾಳ

ಆಗ ಭೋಗಂಗಳು ಆಗದೆ ಇರಲೇಕೆ
ಯಾಗಂಗಳನು ಮಾಡಿ ಹರಿಗರ್ಪಿಸಿ ಸಮ
ಭಾಗವೆರಡು ಹರಿಯಿಂದಾದುದು ಎಂದು

---

*ನೆನೆದು ಏಕಾಂತದಲಿ ನಿರ್ಮಲ ಮನನಾಗೋ (ಪಾಠಾಂತರ)

ಭೋಗಿಸುತಿಪ್ಪುದೆ ವೈರಾಗ್ಯ ವೈರಾಗ್ಯ
ಕಾಗೆಯಂತೆ ಮೈಯ ಕರ್ರಗೆ ಮಾಡಿಕೊಂಡು
ರೋಗ ಬಂದೆಮ್ಮೆಯಂತೆ ನಾವು ಬರೆದುಕೊಂಡು
ಭೋಗದ ವಸ್ತು ಪರಿತ್ಯಾಗವ ಮಾಡಿನ್ನು
ಆಗುವ ಕಾರ್ಯಗಳಾಗುತ್ತಲಿರೆ ಅಂತೆ
ಹೇಗೆ ಜನರ ಕಾಂಬ ಹಾಗೇವೆ ಬಾಹಿರ
ವೈರಾಗ್ಯವನ್ನು ಮಾಡೆ ವೈರಾಗ್ಯವಲ್ಲವೊ
ನಾಗಶಯನ ನಮ್ಮ ಗೋಪಾಲವಿಠಲ ಸಮ್ಮ
ತಾಗಿ ಉಣಿಸಿದ್ದುಂಡು ಇಪ್ಪುದೆ ವೈರಾಗ್ಯ

ಆದಿತಾಳ

ಧನವ ಕಟ್ಟಿದ ಚೀಲ ಧಾನ್ಯ ತುಂಬಿದ ಗೋಣಿ
ಪುಣುಗು ಬೆಕ್ಕಿನಂತೆ ಪುಣ್ಯಾತ್ಮರಘದಂತೆ
ಒಣಗಿದ ಗೋಡೆಗೆ ಹರಳು ಮಿಾಟಿದಂತೆ
ಉಣುವ ಜಿಹ್ವೆಗೆ ಕೈಯಿ ಅನುಕೂಲವಾದಂತೆ
ಮನಸಿಗೆ ಹರುಷವು ಮಾಧವ ಮಾಡಿಸಿದ್ದು
ತನುವಿಗೆ ಸುಖವೆಂದು ತಿಳಿದು, ಕೆಡದಲೇವೆ
ಗುಣಿಸುತಲಲ್ಲಲ್ಲಿ ಗುಣಗಳ ತಿಳಿದು ಹರಿಯ
ನೆನೆದು ನೆನೆದು ದಿನ ಕಳಿವುದೆ ವೈರಾಗ್ಯ
ಮುನಿನುತ ಸಿರಿಗೋಪಾಲ ವಿಠ್ಠಲನು
ಇನಿತೀಪರಿಯಿಂದ ಒಳಗಿದ್ದು ಪೊರೆವನು ೫

ಜೊತೆ

ಅರಿಯದ ವೈರಾಗ್ಯಹರಹಿಕೊಂಬುದಕಿಂತ
ಅರಿತು ಮೊರೆಹೋಗಿರೊ ಗೋಪಾಲವಿಠಲನ್ನ

## ೭೮ ಉಗಾಭೋಗ

ಅನ್ಯರಿಂದಲಿ ಸುಖವಾಯಿತೆಂಬುದಕಿಂತ
ನಿನ್ನಿಂದಾಯಿತೆಂಬ ಕ್ಲೇಶವೇಲಯ್ಯ
ನಿನ್ನರಿಯದೆ ಅನ್ಯರ ಬಲ್ಲೆನೆಂಬುದಕ್ಕಿಂತ
ಕಣ್ಣಿಲ್ಲದಿರುವ ಕುರುಡ ಮೇಲಯ್ಯ
ಪುಣ್ಯ ಪಾಪವರಿಯದೆ ಬದುಕುವ ಮನು
ಜನ್ಮಗಿಂತ ನಾಯಿಕುನ್ನಿ ಲೇಸಯ್ಯ
ಕುಲ-ಹೀನನಾದರು ಸುಖ ದುಃಖಗಳು
ನಿನ್ನಿಂದಾಯಿತೆಂಬ ಮತಿ ಚೆನ್ನಾಗಿ ತಿಳಿಸಯ್ಯ
ಗೋಪಾಲವಿಠಲ

## ೭೯ ಉಗಾಭೋಗ

ಕ್ಷೀರಸಾಗರ ಬಿಟ್ಟು ಲವಣ ಸಾಗರದಲ್ಲಿ
ಮನೆಯ ಕಟ್ಟುವರೇನೊ
ಉತ್ತಮ ತ್ರಿಧಾಮವ ಬಿಟ್ಟು ಮರ್ತ್ಯ ಲೋಕದಲ್ಲಿ
ಬಂದು ಪುಟ್ಟುವರೇನೊ
ನಿತ್ಯ ಸರ್ವಜ್ಞ ಪ್ರಕಾಶ ಮತ್ತೆಯಾದವರ
ಕೂಡಿ ಆಡುವುದೇನೊ
ನಿತ್ಯ ತೃಪ್ತನು ನೀನು ಮುಕ್ತರೊಡೆಯ ರಂಗ
ಮತ್ತೆ ವಿದುರನ ಮನೆಯ ಪಾಲ್ಕುಡಿವರೇನೊ
ಸತ್ಯ ಸಂಕಲ್ಪ ಗೋಪಾಲ ವಿಠ್ಠಲ ನಿನ್ನ
ಕೃತ್ಯ ಕೊಂದಿನಂತಾನಂತ ನಮೊನಮೋ ಎಂಜೆ

## ೮೦ ಉಗಾಭೋಗ

ನಿನ್ನ ಸ್ಮೃತಿಗೊಡದಲೆ ದೂರ ನೋಡಿದರಿನ್ನು
ಮನ್ನಿಸುವರಾರಯ್ಯ ಮಹರಾಯನೆ
ನಿನ್ನಂಥಾಪ್ರಭುವನಾಶ್ರಯಿಸಿದ ಬಳಿಕಿನ್ನು

ಇನ್ನೊಬ್ಬ ನರನ ಬೇಡುವುದುಚಿತವೆ
ನಿನ್ನ ಮರೆಹೊಕ್ಕು ಬದುಕುವನಲ್ಲವೆ ನಾನು
ಎನ್ನ ಮಾನವು ನಿನ್ನದಲ್ಲವೇನೊ
ಘನ್ನ ಕರುಣಿ ವರದ ಗೋಪಾಲವಿಠ್ಠಲ
ನಿನ್ನಲ್ಲಿ ಸಥೆ ಎನಗೆ ನೀರಜಾಕ್ಷ

## ೮೧ ಹರಿ ಸ್ವತಂತ್ರ ಸುಳಾದಿ

ಧ್ರುವತಾಳ

ಚಿಂತಿಸದಿರು ಮನವೆ ಚಿತ್ತ ಚಂಚಲನಾಗಿ
ಸಂತೋಷವನು ತಾಳು ಸತತ ಬಿಡದೆ ತಿಳಿದು
ಅಂತ ಕಾಣದ ಕರ್ಮವತಿಶಯವೆಂದು ನೀ
ಭ್ರಾಂತನಾಗಲಿಬೇಡ ಬಲು ನೋಹದಿ
ಸಂತರ ವಚನಕ್ಕೆ ಸಂಶಯ ತಿಳಿಯದೆ ನಿ
ಶ್ಚಿಂತನಾಗುವುದು ನಗುತ ನೀನು
ಮುಂತಿನ ಪುಣ್ಯ ನಿನಗೆ ಮುಂಕೊಂಡು ಎದುರಲ್ಲಿ
ನಿಂತಿಹುದದರಿಂದ ನಿರುಪಾಧಿಕಾ
ಸಂತತ ಗುರುಗಳು ಸವ್ಯೋಗವಾಗಿ ನಿನಗೆ
ಕಂತುಪಿತನ ಮಹಿಮೆ ತಿಳಿಸುವರೊ
ಕಿಂತು ಎಳ್ಳನಿತಾದರೂ ಹೃದಯದೊಳಿಡದೆ ನಿಜ
ಪಂಥಾನುಸಾರಿಯಾಗೋ ಗುರುವಾಕ್ಯದಿ
ಜಂತು ಜಡಗಳಲಿ ಶ್ರೀಕಾಂತ ಒಳಹೊರಗಿದ್ದು
ತಂತು ನಡೆಸುವ ತನ್ನ ತೋರಗೊಡದೆ
ಅಂತರ್ಯಾಮಿಪರ ವಖಿಳ ವ್ಯಾಪಾರಮಾಡೆ
ಎಂತು ನಿನಗೆ ಸುಖಯೋಚಿಸಿ-ಕೋ
ರಂತಾಗ ಗೊಡದಿರು ರಹಸ್ಯವೆಂದೀಮಾತು
ಅಂತಃಕರಣಾನುಭವದಿ ಭಜಿಸು ಹರಿಯ

ದಂತಿವರದ ವೇಣುಗೋಪಾಲ ವಿಠ್ಠಲ
ಎಂತಾದಡಾದರೂ ತನ್ನ ಬಳಿಯ ನೀವ ೧

### ಮಠ್ಯತಾಳ

ಜ್ಞಾನವಂತನಾಗು ಜ್ಞಾನಿಗಳಿಗೆ ಬಾಗು
ಜ್ಞಾನ ಬೆಳಕಿನಿಂದ ಜ್ಞಾನತಮವ ನೀಗು
ಜ್ಞಾನವೆ ಸಕಲ ಸಾಧನಕ್ಕೆ ಪ್ರಧಾನ
ಜ್ಞಾನವೆ ಮುಖ್ಯ ಮುಕುತಿಗೆ ಸೋಪಾನ
ಜ್ಞಾನವೆ ಭವಕೆ ಮೋಚನೆ ಮಾಡುವುದು
ಜ್ಞಾನಕಿಂತಲಿ ಮತ್ತೇನು ಅಧಿಕವಿಲ್ಲ
ಜ್ಞಾನ ಸುಖಕೆ ಮೇಲೊಂದೆನೂ ತೋರುವುದಿಲ್ಲ
ಜ್ಞಾನವೆ ಹರಿಮೂರ್ತಿ ಸೂಚನೆ ಮಾಡುವುದು
ಜ್ಞಾನ ಹೀನರ ಸಂಗ ನೀನು ಮರೆಯೊ ಸು
ಜ್ಞಾನವಂತರ ಸೇವೆ ನೀನು ಪಡೆಯೊ
ವೇಣುಗೋಪಾಲ ವಿಠಲ ಸರ್ವಕ್ಕೆ ನೀನೆ
ನೀನೆ ಎಂದು ನಲಿನಲಿದಾಡೊ ೨

### ತ್ರಿಪುಟತಾಳ

ಹರಿಯಿಚ್ಛೆ ಜಗದೊಳು ಹರಹಿ ಸಕಲಶಾಸ್ತ್ರ
ನರರಿಗೆ ತಿಳಿಯಗೊಡದಿಪ್ಪುದು
ಹರಿಭಕ್ತರದರೊಳು ಹರಿಪ್ರೇರಣೆಯಿಂದ
ಅರಿವರೊ ನರಹರಿಯ ಮಹಿಮೆಯನ್ನು
ಪರಮ ಕರುಣದಿಂದ ಗುರುಗಳು ನಿನಗೊಂದು
ಗುರುತಿನ ವಾಕ್ಯವನು ತೋರಿ ಪೇಳಿರಲು
ಅರಿತುಕೊ ಅದರೊಳು ಸಕಲ ಸಾಧನವುಂಟು
ಗುರುಗಳು ನುಡಿದ ವಚನ ದೃಢವಾಗಿ
ಅರೆಮರೆ ಮಾಡದೆ ಆದರ ಭಕುತಿಲಿ

ಗುರು ಹಿರಿಯರಿಗೆರಗಿ ಹರಿಲೀಲೆಯು
ಗುರುತಿಟ್ಟು ಮನಾದಿ ಸರ್ವೇಂದ್ರಿಯಂಗಳೊಳು
ಬೆರೆಸಿದರೆ ಮುಖ್ಯಸಾಧನ ಶಿಖರ ಮ
ತ್ತರಿಯದಿರು ಇತರ ಸಂಶಯಗಳನೊಂದು
ಹರಿಪದದಲಿ ಮನವೆರಕ ಮಾಡೊ
ಪರಮಾಣು ಜೀವರೊಳು ಸಿಂದೇವಿ ಸಹಿತಲ
ಲ್ಲಿರುತಿದ್ದು ಹರಿ ಸಕಲ ಕಾರ್ಯಗಳ
ಹೊರಗ್ಹೊರಗಿರುತಿಪ್ಪನಧಿಷ್ಠಾನದಿ ಸಕಲ
ಸರಸಿಜ ಭವಾದಿಗಳ ಮನೆಯ ಮಾಡಿ
ಹೊರಗೆ ಒಳಗೆ ತಾನೆ ಯಾವತ್ತು ವ್ಯಾಪಿಸಿ
ಹರುಷದಿಂದಲಿ ಸತಿಯಳ ಒಡಗೂಡಿ
ಸರಿಸಮಾನರು ಒಬ್ಬರಿಲ್ಲದ ದೇವ ತನ್ನ
ವರಸಂಕಲ್ಪಾನಾದಿ ಸತ್ಯಮಾಳ್ಪ
ನಿರುತ ನೀನು ಕಾಂಬ ಯಾವತ್ತು ಆಕಾರ
ಪರಮಾಣ್ವಾತ್ಮಕ ಕಾರ್ಯ ಕಾರಣವೊ
ಅರಿಯೊ ನೀನದರೊಳು ವ್ಯಾಪ್ತರಾಗಿರುವರು
ಹರಿ ಸಿರಿ ವಿರಿಂಚಾದಿ ಮುಖ್ಯರೆಲ್ಲಾ
ಪರಮ ಪುರುಷ ಹರಿಯ ಸೇವೆ ಮಾಡುತಲಲ್ಲಿ
ಇರುವರು ತದ್ವರ್ಣ ತದಾಕಾರದಿ
ಹರಿಶಬ್ದವಾಚ್ಯನು ಹರಿಶಬ್ದನಿಯಾಮಕ
ಹರಿಶಬ್ದ ಮಾಡೆ ಸರ್ವರು ಮಾಳ್ಪರು
ಹರಿ ಸುಮ್ಮನಿರಲೊಂದು ಆಗದು ನಡೆನುಡಿ
ಹರಿಯೆ ಈ ಜಗಕೆ ಕಾರಣ ಮುಖ್ಯದಿ
ಸುರರು ಸಾಂಶರು ಹರಿಯು ಅಭಿನ್ನನು
ಪೂರ್ಣದ್ರವ್ಯವಂತನೆಲ್ಲಿದ್ದರೂ
ಧರೆಯೊಳು ವಸ್ತ್ರ ಗೃಹದ ಸಮೂಹಗಳೊಳು
ಶರಧಿಯುದಕ ವ್ಯಾಪಿಸಿ ಇದ್ದಂತೆ

ಹರಿಯ ವ್ಯಾಪ್ತಿಯು ಪರಮಾದ್ಭುತ ಮಹಿಮ
ಪರಮೈಶ್ವರ್ಯಭರಿತ ಪರಬೊಮ್ಮ
ಪರಮಾತ್ಮನ ರಕ್ಷಣ ಮರೆಯದೆ ಸ್ಮರಿಸುವುದು
ಕುರುಹು ಕಾಣುವಿ ಇದರಿಂದ ಬೇಗ
ಪರಮ ಮುಖ್ಯ ಜಗಕೆ ವೇಣುಗೋಪಾಲ ವಿಠಲ
ಅರಸಿನ ಲೀಲೆಯನರಿತು ಸುಖಿಪುದು.

ಅಟತಾಳ

ದಾನಧರ್ಮ ಪರೋಪಕಾರ ಯಾಗಾದಿ
ಏನೇನು ಕರ್ಮ ಸಫಲವಾಗಲು ಮತ್ತೆ
ಜ್ಞಾನಿಗಳ ಕರುಣ ಸಂಧಿಸುವುದಾಮೇಲೆ
ಮನದಿ ಶ್ರೀಹರಿಯ ವ್ಯಾಪಾರವು
ಕಾಣಿಸಿ ಸುಖಸಿಂಧು ಸೇರುವನು ಸುರ
ಶ್ರೇಣಿಯ ಕರುಣಾ ಸಂಪರ್ಕದಿಂದ
ನೀನು ಹಲವು ಬಗೆ ಯೋಚಿಸಿ ವಿ
ಹೀನನಾಗದಿರು ಹರಿ ಜನಕೆ
ದಾನವಾರಿ ವೇಣುಗೋಪಾಲ ವಿಠ್ಠಲ
ತಾನು ಒಲಿದು ನಿನ್ನ ಮಾನಸದಲಿ ಪೊಳೆವ

ಆದಿತಾಳ

ಹಸಿದವನಿಗೆ ಷಡುರಸದನ್ನ ದೊರೆದಂತೆ
ತೃಷೆಪೀಡಿತಗೆ ಪೀಯೂಷ ಮಡುವು ಸಿಕ್ಕಿದಂತೆ
ವಸನ ಹೀನಗೆ ವಜ್ರ ಕವಚ ದೊರಕಿದಂತೆ
ಬಿಸಿಲಿಂದಾರ್ತನಾದವನ ವಸಂತಕ್ಕೊಯಿದಂತೆ
ಪುಸಿಯಲ್ಲ ಕೇಳು ಮನವೆ ಹಸಗೆಟ್ಟು ಪೋಪ ನಿನಗೆ
ಬಿಸಜನಾಭನು ಏಕರಸ ಸಿಕ್ಕಿದುದರಿಂದ
ನಸುನಗೆಮೊಗ ವೇಣುಗೋಪಾಲ ವಿಠ್ಠಲನ
ಕುಶಲಕ್ಕೆ ಮೆಚ್ಚಿಪದ ಬಿಸಜಕ್ಕೆ ಭೃಂಗನಾಗು

ಜೊತೆ

ಅಧೀನ ತಿಳಿವುದಕ್ಕಿಂತ ಅನ್ಯ ಸಾಧನವಿಲ್ಲ
ಒದಗಿ ಸ್ಮರಿಸೊ ವೇಣುಗೋಪಾಲ ವಿಠಲನ್ನ

೮೧ ರಾಗ ಸುಳಾದಿ ಮಟ್ಟ

ಶರಣು ಹರಿಯು ಶರಣಗ್ರೇ
ಸರನೆ ಹನುಮ ಭೀಮ ಮಧ್ವ
ಗುರುವೆ ನಿಮ್ಮ ಚರಣಕಮಲಕೆರಗಿ ನಮಿಸುವೆ ಪ

ಚಿನ್ನ ತಪುತ ಕಾಯನೊಸಲ
ಲಿನ್ನು ಊರ್ಧ್ವ ಪುಂಡ್ರ ತುಳಸಿ
ಘನ್ನ ವೈಷ್ಣವನ್ನೆ ಮುದ್ದು ಸನ್ಯಾಸಿಯೇ
ಚಿನ್ನದೊಂಟೆ ಚೌಕಳೀ ವೋ
ಹನ್ನ ಸರ ಕಿರೀಟಧಾರಿ
ಮನ್ನುಜರ ರೂಪತಾಳ್ದ ಭೀಮಸೇನನೆ
ಕರ್ಣಕುಂಡಲವು ಕಚ್ಚುಟಿ
ಘನ್ನ ಮೌಂಜಿ ಧರಿಸಿ ಕಪಿ
ವರ್ಣ ರೂಪತಾಳ್ದ ಹರಿಯ ಭಜಕ ಹನುಮನೆ
ನಿನ್ನದ-ರುಶನವು ಎನಗೆ
ಇನ್ನು ಆದುದಕ್ಕೆ ಫಲವು
ಅನ್ಯ ವಿಷಯ ಬಿಡಿಸಿ ಬೇಗ ಹರಿಯ ತೋರಿಸೊ ೧

ಮಧ್ಯಗೇಹನ ತಪವು ಅಭಿ
ವೃದ್ಧಿಯಾದದ್ದು ಕಂಡು
ಉದ್ಭವಿಸಿದಾನಂದ ತೀರ್ಥಮುನಿಯೆ
ಶುದ್ಧಮೂಲ ಕಲಿಯ ಅಂಶ
ಬದ್ಧದ್ವೇಷಿ ದುರ್ಯೋಧನನ
ಒದ್ದು ಕಾಯ ಹದ್ದಿನಿಂದ ಮರ್ದಿಸಿದವನೆ

ಸುದ್ದಿಗೊಂಡು ಪೋಗಿ ಸೀತೆ
ಯಿದ್ದ ಸ್ಥಳವ ನೋಡಿ ಅಸುರ
ರೊದ್ದು ರಾಮರಿದ್ದ ಎಡೆಗೆ ಬಂದು ನಿಂತನೆ
ಬಿದ್ದೆ ನಿಮ್ಮ ಪಾದಗಳಿಗೆ
ತಿದ್ದಿ ಎನ್ನ ಮತಿಯನಾದ್ಯ
ವಿದ್ಯೆ ಗಂಟು ಬಿಡಿಸಿ ಎನ್ನ ಉದ್ಧರಿ-ಪುದು ೨

ಮೂರು ಅ-ವತಾರದಲ್ಲಿ
ಮೂರು ಮೂರು ಭಕುತಿಯಿಂದ
ಮೂರು ಮೂರ್ತಿಗಳನು ಭಜಿಪ ಮೂಲ ಗು-ರುವೆ
ಸಾರುತಿಹವು ಶ್ರುತಿಯು ನಿಮ್ಮ
ದಾರ ಗುಣಗಳನ್ನು ಬಿಡದೆ
ಆರತರನು ಬಿಡದೆ ಪೊರೆವ ಸ-ವಿಾರ ಸದ್ಗುಣ

ಭಾರತೀಶ ಭವಪಿನಾಶ
ಸಾರ ಹೃದಯ ಸಾಧು ಸಾಧು
ಭಾರ ನಿನ್ನದೈಯ ಎನ್ನಾಧಾರ ಪ್ರಾಣನೆ
ತೋರುವುದು ನಿಮ್ಮ ಹೃದಯ
ದ್ವಾರ ಗೋಪಾಲ ವಿಠಲ
ಮೂರುತಿಯನು ಬಿಡದೆ ಎನ್ನ ಮನಕೆ ಒದಗಿಸಿ ೩

೮೨ ರಾಗ ರೇಗುಪ್ತಿ ಅಟತಾಳ

ಸಾಕು ಸಾಕು ಭವಸಂಗ, ಚಿತ್ತ ಪ
ವೈಕಲ್ಯ ಕಾರಣವದು ಮಾನಭಂಗ ಅ.

ಪ್ರಾಕೃತರೊಡನೆ ಸಂಬಂಧ, ಸುವಿ
ವೇಕಕ್ಕೆ ಹಾನಿ ತೋರುವ ಪ್ರತಿಬಂಧ
ಶೋಕ ಮೋಹಗಳದರಿಂದ, ಮುಂದೆ
ಏಕಾಕಿಯಾಗಿ ಸಂಚರಿಪುದೆ ಚೆಂದ ೧

ಬಿಟ್ಟದ್ದು ಬಯಸೋದು ಸಲ್ಲ, ತಾ
ಕೊಟ್ಟಾಭಯಕೆ ಕುಂದು ಬರಬಾರದಲ್ಲ
ಸುಟ್ಟು ಪಾಪಂಗಳನೆಲ್ಲ, ಬಲು
ಧಿಟ್ಟನಾಗಲಿಬೇಡವೆ ಹೇಸಿದ್ದೆಲ್ಲ ೨

ಕ್ರೂರ ಕಾಮನದೊಂದು ಕಾಟ, ಮ
ತ್ತಾರಯ್ಯ ಇಹಪರಕೆಲ್ಲ ಕವಾಟ
ಘೋರ ಪಾಪಂಗಳ ಕೂಟ, ಪರ
ನಾರಿಯರೊಡನಾಟ ನರಕದೊಳಾಟ ೩

ಚಲಿಸದೆ ಧ್ಯಾನವ ಮಾಡೊ, ಮನ
ವೊಲಿಸದದೇ ಶ್ರವಣ-ವನ್ನೆ ಮಾಡೊ
ಸುಲಭದ ಜಪದಲೋಲ್ಯಾಡೊ, ಚಿತ್ತ
ವೊಳಗಾಗದಿರಲು ಕೀರ್ತನೆಗಳ ಪಾಡೊ ೪

ಎಲುಮಜ್ಜ ಮಾಂಸದಪಿಂಡ, ಇದು
ತಿಳಿದು ನೋಡಿದರಲ್ಲಿ ಹುರುಡಿಲ್ಲ ಕಂಡ್ಯ
ಮಲಮೂತ್ರ ಪೂರಿತ ಭಾಂಡ, ಇದ
ರೊಳಗಭಿಮಾನವುಳ್ಳಾತನೆ ಭಂಡ ೫

ಭಿನ್ನ ಬುದ್ಧಿಯ ನೆರೆಮಾಣು, ಇನ್ನು
ನಿನ್ನಂತೆ ಸಕಲ ಭೂತಂಗಳ ಕಾಣು
ಸನ್ನುತನಾದಡೆ ಜಾಣು, ಇದ
ಚೆನ್ನಾಗಿ ಕಾಣಲೀಸದು ಕರ್ಮರೇಣು ೬

ಕಪಟ ಕಲ್ಮಷವನೀಡಾಡು, ಬಲು
ಗುಪಿತದಿ ಹರಿ ಭಕುತಿಯ ನೀ ಮಾಡು
ಚಪಳವ ತ್ತಿಯೆ ನಗೆಗೇಡು, ಬಲು
ನಿಪುಣರ ನಡೆವಳಿಯನೆ ನೀನೋಡು ೭

.... .... .... .... .... ೮

ವ್ಯಾಪಾರಂಗಳ ತ್ಯಜಿಸು, ಬಪ್ಪ
ಕೋಪ ತಾಪಂಗಳ ಮಿಗೆ ಕಡೆಗಣಿಸು
ಪಾಪ ಕರ್ಮವ ಪರಿಹರಿಸು, ಚೆಲ್ವ
ಗೋಪಾಲ ವಿಠಲ ಮೂರ್ತಿಯ ಸಾರಿ ಸುಖಿಸು ೯

## ವಿಷಯಾಸಕ್ತಿ ನಿರಾಕರಣ ಸುಳಾದಿ

ಧ್ರುವತಾಳ

ಏಸೇಸು ಜನುಮಂಗಳು ಎನಗೆ ಬಂದು ಪೋದವು
ನಾಶವಾಗಲಿಲ್ಲ ಮನದ ಆಸೆ
ಬೇಸರವಾಗಲಿಲ್ಲ ವಿಷಯಂಗಳಲ್ಲಿ ಬುದ್ಧಿ
ಸಾಸಿರದೊಳಗೊಂದು ಪಾಲಾದರೂ
ನಾಶವೈದಿತು ಹೀಗೆ ನಾನಾ ಹಿಂದಿನ ಜನ್ಮ
ಈ ಶರೀರವ ಧರಿಸಿ ಇಲ್ಲಿ ಬಂದೆ
ಭೂಸುರ ಜನ್ಮದಲ್ಲಿ ಬಂದೆ ಸುಕೃತ ಬಲು
ರಾಶಿಗಳಿಸಿ ಉಂಬುದೆ ಮಹಾಫಲವೊ
ದೇಶ ಕಾಲ ನೋಡಲನುಕೂಲವಾಗಿಹುದೊ
ವಾಸುದೇವನೆ ನಿನ್ನ ಇಚ್ಛೆಯೊಂದೇ
ಏಸುಮಾತುಗಳನ್ನು ಆಡಿದರೇನು ನಿನ್ನ
ದಾಸರ ದಾಸ ನಾನುಂಟಾಗಿತ್ತೆ
ಈ ಸಮಯವೆ ನೋಡು ಎನ್ನನುದ್ಧರಿಸಲು
ದೋಷರಹಿತ ಜ್ಞಾನಾನಂದ ಪೂರ್ಣ
ಲೇಶವಾದರು ನಿನ್ನ ತಿಳಿವ ವಿಷಯದಲ್ಲಿ
ನಿಸ್ಸಂಶಯವೆಂಬುದೆ ಸರ್ವೇಶ್ವರ
ಸಂಶಯ ಮಿಕ್ಕಜ್ಞಾನ ಆನಾಹುದಿಲ್ಲ ವಿ

ಶೇಷವಾಗಿನ್ನು ನೀನು ಅರಿಯದಿದ್ದೆ !
ನೀ ಸ್ವತಂತ್ರನು ನಿನಗೆ ಬೇಕು ಬೇಡೆಂಬರಿಲ್ಲ
ಈ ಸಥೆ ಮಾತು ನೀನೇ ಕೊಟ್ಟದ್ದಿಲ್ಲ
ಈಷಣತ್ರಯದಲ್ಲಿ ಎಳೆವೆನ್ನ ಮನ ಸ
ರ್ವೇಶನೆ ನಿನ್ನ ಕಡೆಮಾಡಬಹುದೊ
ನಾಶರಹಿತ ಶ್ರೀಶ ಗೋಪಾಲ ವಿಠ್ಠಲ
ಶಾಶ್ವತವಾಗಿ ವಾಸವಾದ ಮೂರುತಿ ೧

ಮಠ್ಯತಾಳ

ಕಾಣೆನೊ ಕಾಣೆನೊ ಕಡೆದಾಟಿಸುವವರ
ಜ್ಞಾನಪ್ರೇರಕರ ನಾ ಕಾಣೆ ಕಾಣೆ ಇನ್ನು
ಗೇಣು ಮುಂದಕ್ಕೆ ಸಾಗೆ ಮೊಳವು ಹಿಂದಾಗುವುದು
ಕಾಣಿ ಪೋದರೆ ಎನ್ನ ಪ್ರಾಣವೊಪ್ಪಿಸುವೆನೊ
ಹಾನಿ ಜಯಾದಿಗಳನೇನು ತಿಳಿಯಲಿಲ್ಲ
ಶ್ವಾನ ಬುದ್ಧಿಯವ ನಾನಾ ಕುಯೋಚಿಸುವೆ
ಜ್ಞಾನವಂತರ ಸಂಗ ವೇನಂತಾಗುವುದೊ
ಗೋಣು ಹಿಸುಗುವರ ಸಂಗವೆನಗೆ ಬಹಳ
ಶ್ರೀನಿವಾಸ ಶ್ರೀಶ ಗೋಪಾಲ ವಿಠ್ಠಲ
ನಾನು ನಿನ್ನವರವನು ಏನು ಮಾಡಿದರು ೨

ರೂಪಕತಾಳ

ಇಂದ್ರಿಯಂಗಳನಿತ್ತೆ ಅದಕೆ ವಿಷಯಂಗಳಿತ್ತೆ
ಒಂದರ ಸಾಧನಗಳೊಂದಕ್ಕಾಗಿವೆ ಅಯ್ಯ
ಚೆಂದದಿ ನಿನ್ನಯ ಕಥೆಯ ಕೇಳುವ ಕರ್ಣ
ಮಂದಿವಾರ್ತೆಯ ಕೇಳಿ ಮರುಳಾದುವೊ
ಸುಂದರ ನಿನ್ನ ಮೂರ್ತಿಯನೊಳ್ಪ ಅಕ್ಷಿಗಳು

ಸೌಂದರ್ಯ ಸ್ತ್ರೀಯರ ನೋಡಲೆಳೆಸಿದವಯ್ಯ
ಇಂದಿರಪತಿ ನಿನ್ನ ನಿರ್ಮಾಲ್ಯ ತುಳಸಿಯ ಬಿಟ್ಟು
ಇಂದುಮುಖಿಯರ ಮೈಯಗಂಧ ಕೆಳೆಸಿತು ಘ್ರಾಣ
ಪೊಂದಿ ನಿನ್ನವರನಪ್ಪುವ ಸ್ಪರುಶೇಂದ್ರಿಯ
ಮಂದ ಸ್ತ್ರೀಯರ ಮೈಯಾಲಿಂಗನಕ್ಕೆಳೆವುದು
ಅಂವದಿ ಸುಜನರರ್ಪಿಸಿದನ್ನಗಳ ಬಿಟ್ಟು
ನಿಂದ್ಯರ ಮನೆಯ ಓಗರ ಬಯಸುವುದು ಜಿಹ್ವೆ
ಇಂದ್ರಿಯಂಗಳು ಎಲ್ಲ ಈ ಪರಿ ಒಟ್ಟಾಗೆ
ಮುಂದಿನ ಗತಿಯೇನೋ ಮುಕುಂದನೆ
ಕಂದರ್ಪಜನಕ ಗೋಪಾಲ ವಿಠ್ಠಲ ಕೃಷ್ಣ
ಮುಂದೇನುಗತಿ ಎನಗೆ ಮುಕುಂದನೆ ೩

ಝಂಪೆತಾಳ

ಮದುವೆಯಾಗುವುದಕ್ಕೆ ಮಾಡಿದ ಸಾಧನ
ವಧೆಯನಂತರ ಉತ್ತರ ಕ್ರಿಯಕ್ಕಾದಂತೆ
ಉದರಕ್ಕೋಸುಗವಾಗಿ ಇಟ್ಟ ಅನ್ನವ ನೊಯ್ದು
ಉದರದ ಮೇಲಿಡಲು ಕ್ಷುದೆ ಪೋಪುದೆ
ಬಧಿರನ ಮುಂದೆ ಗಾಯನ ಮಾಡಿದಂತೆ ಆ
ದುದು ಎನಗೈಯ ಕೊನೆಗೆ ನೋಡಾ
ಒದಗಿ ಬಾಹ ಪೈಣವ ಗತಿ ತಪ್ಪದೊ
ಉದಯ ರಾತ್ರಿ ಮಧ್ಯವಾದದ್ದರಿಯೆ
ಇದೆ ಸಮಯ ಮೀರಿದರೆ ಮುಂದಾರೊ ನಾನಾರೊ
ನದಿಗಳ ತೆರೆಯಂತೆ ಜನನ ಮರಣ
ವಿಧಿ ಕುಲವು ಸುಮ್ಮನೆ ಬಾಹೊದಿಲ್ಲವೊ
ವಿಧಿ ಜನಕನೆ ನೀನು ತಿಳಿಯದ್ದಿಲ್ಲವೊ
ಸುದರುಶನ ಪಾಂಚಜನ್ಯ ಪಾಣಿ ಮಧುಸೂದನ
ಕದನ ಕರ್ಕಶಮಲ್ಲರ ವೈರಿ ಹೃಷೀಕೇಶ

ಅದುಭುತ ಮಹಿಮನೆ ಅಲೌಕಿಕ
ಬುಧಜನ ಪ್ರೀಯ ಗೋಪಾಲ ವಿಠಲರೇಯ
ವಿಧಿ ನಿಷೇಧಕ್ಕೆ ನೀನೆ ನಿಯಾಮಕ ೪

ತ್ರಿಪುಟತಾಳ

ಚಿಂತಾಮಣಿಗಾರು ಬೆಲೆಯ ಕಂಡವರುಂಟು
ಕಂಥೆಗೆ ಬೆಲೆಯುಂಟು ನಾನಾಥಿದ್ರ
ಕಂಥೆಯೊಳಗೆ ಮಣಿಯು ಕಟ್ಟಿದ್ದ ಕಾರಣ
ಸಂತ ಜನರು ಬಂದಿದ ನೋಳ್ಪರೊ
ಕಂಥೆ ಬಿಡಿಸಿ ಮಣಿಯ ಕಡೆಗೆ ಮಾಡಿದರಾಗೆ
ಚಿಂತಾಮಣಿಯ ಕಂಥೆ ಚಿಂತಿಪುದೆ
ಸಂತೆಯ ಜನರೆಲ್ಲ ಕಂಥೆಯ ನೋಳ್ಪರು
ಕಂಥೆಯಲಭಿಮಾನ ಮಣಿಗಿದ್ದ ಕಾರಣ
ಸಂತ ಜನರು ಇದ ಬೆಲೆಗೆ ಬಳಸುವರಯ್ಯ
ಚಿಂತಾಮಣಿಗೆ ಬೆಲೆ ಕಟ್ಟುವರೆ ?
ಅಂತರ್ಮುಖರೆ ಇದರ ವಿವರ ಬಲ್ಲರಲ್ಲದೆ
ಚಿಂತಿತವಾಗುವುದೆ ಸರ್ವರಿಗೆ
ಶಾಂತಮೂರುತಿ ನಮ್ಮ ಗೋಪಾಲ ವಿಠಲನಿ
ನಿಂತಲ್ಲಿ ಸಕಲ ನಿದಾನವುಂಟು ೫

ಅಟತಾಳ

ಚೇತನನ್ನ ನೀನು ಜಡವ ಮಾಡುವಿ ಅ
ಚೇತನ ಪಿಡಿದಿನ್ನು ಚೇತನ ಮಾಡುವಿ
ಪಾತಕ ಪಾವನವೆರಡು ನಿನ್ನಾಧೀನ
ಏತರವನು ನಾನಲ್ಲ ನಿನ್ನಾಧೀನ
ಕೋತಿಯಮರಿ ತಾಯ ಕಚ್ಚಿಕೊಂಡೊಯ್ದಂತೆ

ಆತೆರವ್ವೈಯ ನಿನ್ನ ಹಿಡಿತ ಬಲು
ಪ್ರೀತಿ ಬಡಿಸು ಬಲು ಯಾತನೆ ಬಡಿಸಿನ್ನು
ಖ್ಯಾತಿ ಅಖ್ಯಾತಿಯು ನಿನ್ನದೋ ಸರ್ವೇಶ
ಸ್ವಾತಿಹನಿಯು ಕಪ್ಪೆಚಿಪ್ಪು ಬಯಸಿದಂತೆ
ಆತೆರದಲಿ ನಿನ್ನ ಕರುಣಾರಸ ಬಿಂದು
ಏತರಿಂದಾಗಲಿ ಎರೆವುದಿಂದೆನ್ನಲ್ಲಿ
ಆತುರನಾಗಿ ಕೈಸೋತು ನಿಲ್ಲಿಸಿ ಇಪ್ಪೆ
ಜ್ಯೋತಿರ್ಮಯಮೂರ್ತಿ ಗೋಪಾಲವಿಠ್ಠಲನೀ
ಪ್ರೀತನಾಗುವ್ರದೇತರಿಂದಲಿ ಪೇಳೊ ೬

ಆದಿತಾಳ

ಮರವಾಗಿ ಮನೆಯಾಗಿ ಕಾಣಲಿಲ್ಲ
ತುರುಕರುವು ಆಗಿ ಕಾಣಲಿಲ್ಲ
ಕೊರವನಾನಾಗಿನ್ನು ಕಾಣಲಿಲ್ಲ
ಎರಳಾಗಿ ಕಪ್ಪೆಯಾಗಿ ಕಾಣಲಿಲ್ಲ
ನೊರಜಾಗಿ ನೆಗಳಾಗಿ ಕಾಣಲಿಲ್ಲ
ಮರದಿಂದ ಮರಕಡರಿ ಕಾಣಲಿಲ್ಲ
ಎರಡು ಪಕ್ಕದಿಹಾರಿ ಕಾಣಲಿಲ್ಲ
ಪುರ ನಿರ್ಮಿಸಿ ನಿನ್ನ ಕಾಣಲಿಲ್ಲ
ಪರಮಹಂಸನಾಗಿ ಕಾಣಲಿಲ್ಲ
ಗಿರಿ ಗುಹೆಗಳ ತುಕ್ಕಿ ಕಾಣಲಿಲ್ಲ
ಪರಿಪರಿವ್ರತ ಉಪವಾಸಗಳನೆ ಮಾಡಿ
ಬರಿದೆ ದಂಡಿಸಿ ತನುವ ಕಾಣಲಿಲ್ಲ
ನೆರೆ ಮರುಳಹಂಕಾರದಿ ಮಾಯಕೆ ಸಿಲುಕಿನ್ನು
ಅರಿದವ ನಾನಲ್ಲ ನೀನಿರೆ ನಾನಾರೊ
ತರಳನ ಅಪರಾಧ ತಾಳಿದೆ ನಿನಗಿನ್ನು
ಸರಿಯುಂಟೆ ಸರಿಯುಂಟೆ ಕರುಣಾನಿಧೆ

ಎರಡು ವಿಂಶತಿ ವತ್ಸರವಾಯಿತು ಈ
ಹರಣ ಧರಿಸಿ ಕರುಣಾಕರನೆ ನೀನು
ಇರುವ ಬಗೆಯನೆಚ್ಚರಿಸಂದದಕೆ ಎನ್ನ
ಬರಿದೆ ಪೋಗಗೊಡಲಾಗದೊ
ಗುರುದೇವತಾ ಪ್ರೀತಿಯಾಗಿ ಸಕಲ ಕರ್ಮಾ
ಚರಣೆಯ ಮಾಡಿಸೊ ಹರೆ ಹರೆ ಹರೆ ಹರೆ
ಪರಮ ದಯಾನಿಧೆ ಗೋಪಾಲ ವಿಠ್ಠಲ
ಇರುಳು ಹಗಲು ನಿನ್ನ ಸ್ಮರಣೆಯ ನೀಡೊ ೭

ಜೊತೆ

ಸಕಲಕ್ಕು ನಿನ್ನ ಬೇಡುವುದೇನೋ ವಿಷಯದ
ಸಕುತಿ ಬಿಡಿಸೊ ಗೋಪಾಲವಿಠ್ಠಲರೇಯ

## ೮೪ ಪ್ರಾರ್ಥನಾ ಸುಳಾದಿ

ಧ್ರುವತಾಳ

ಕರೆದ ಮಾತಿಗೆ ನೀನು ಬರುವನಲ್ಲವು ಕಾಣೊ
ಅರುಹಾಯಿತೆನ್ನ ಮನಕೆ ಅಪ್ರಮೇಯ
ತುರುಸ್ವಭಾವ ನೀನು ತುರಿಸಿವರೇ ಲಭ್ಯ
ತುರಿಸುವ ಬಗೆಯ ತಿಳಿಯಬೇಕಾಯಿತು
ಪುರುಷ ನಿನಗೆ ಸಮಾಧಿಕರಿದ್ದರಾದಡೆ
ವರೆಸ್ಯಾಡಬಹುದು ನಿನ್ನವರ ಕೂಡೆ
ಪರಮ ಅಸ್ವಾತಂತ್ರ ಪರಿಪಾಲಿತ ನಿನ್ನಿಂದ
ವರಿಸುವೆ ಎಷ್ಟೆಂದು ವಾರಿಜಾಕ್ಷ
ಅರಸು ನೀನೆಂವೆ ನಿನ್ನ ಸ್ಪರುಶಮಾಡುವುದಕ್ಕೆ
ಭರವಸೆ ಕೊಡುವುದೊ ಭಕ್ತ ಪ್ರಿಯ
ಪುರುಷನ್ನ ಕೂಡಲಿನ್ನು ಸಲಿಗೆ ಕೊಟ್ಟರೆ ಅರಸಿ

ಸರಸವಾಡುವಳು ತನ್ನ ಸರಿಬಂದಂತೆ
ಅರಸರಸರ ಗಂಡ ಗೋಪಾಲವಿಠಲ ಉ
ಚ್ಚರಿಸುವೆ ನಿನ್ನ ಗುಣಕರ್ಮಗಳ ೧

ಮಠ್ಯತಾಳ

ಉರಗನಂದದ ಗುಣವುಳ್ಳ ಪುರುಷ ನೀನು
ಹರಿಯೆ ಮಾರ್ಜಾಲನಂದದ ಗುಣದವ
ಗರುಡನಂಥವ ನೀನು ವರಕಪಿ ಗುಣದವ
ಸರಿ ಬಿಡು ಮೂಷಕದ ಗುಣವುಳ್ಳವ ನೀನು
ಕರಿಯಂಥವ ನೀನು ಕಪ್ಪೆಯಂಥವ ನೀನು
ಪರಿಪೂರ್ಣ ನಿರ್ದೋಷ ಗೋಪಾಲ ವಿಠ್ಠಲ
ಸರಿಬಂದಂತಾಡುವ ಸಲಿಗೆಯಿಂದಲಿ ನಾನು ೨

ತ್ರಿಪುಟತಾಳ

ಮಡಿವಾಳನಂಥವ ಮೈಲಿಗೆ ಕಳೆವಲ್ಲಿ
ಬಡಗಿಯಂಥವ ದೋಷವ ಕಳೆವಲ್ಲಿ
ತಡೆಯದೆ ಕುಲಾಲನಂಥವ ದೇಹವ
ಬಿಡಲು ಪುನಹಾ ಕೊಡುವಲ್ಲಿ ಮನೆಮಾಡಿ
ಪಿಡಿದು ಒಂದಾನಂತ ಮಾಡುವಲ್ಲಗಸಾಲಿ
ಪಿಡಿದು ಬಿಡದಿರುವಲ್ಲಿ ಉಷ್ಟ್ರನಂಥವ ನೀನು
ಬಡವ ಬಲ್ಲಿದನೆನ್ನದೆ ಸರಿವೆರಸಿದ್ದು
ತಡೆಯದೆ ಸರ್ವವ್ಯಾಪಾರ ಮಾಡುವ
ಕಡು ದಯಾಸಾಗರ ಗೋಪಾಲವಿಠ್ಠಲ
ನುಡಿದೆನೊ ನಾನಿನ್ನಲ್ಲಿದ್ದ ಗುಣಗಳಿಗೆ ೩

ಅಟತಾಳ

ಆಳುಗಳಿಂದೊಂದು ಅಪರಾಧ ಬಂದಪು
ತಾಳಿಕೊಂಡವ ಸ್ವಾಮಿ ಎನಗೆ ಕಾಣೊ

ಊಳಿಗವನು ಕೊಂಡು ಫಲಕೊಟ್ಟರಾಯಿತೆ
ಪೇಳಿ ನಿನ್ನ ಸ್ವಾಮಿತ್ವ ಪೂರ್ಣತೆಯನ್ನು
ಊಳಿಗವನೆ ಮಾಡಿ ಫಲ ಬೇಡಿಕೊಂಬಂಥ
ಆಳು ನಾನಾಹುದಿಲ್ಲ ಯೋಚನೆ ಏತಕೆ
ವೇಳೆ ಸಮಯ ನೋಡಿ ಕೇಳಲಿಲ್ಲದೊಡೆ
ವೇಳೆಯಾವುದು ಪೇಳೊ ಭಕ್ತ ಬೇಡುವುದಕ್ಕೆ
ಕೇಳೆನ್ನ ಸ್ವಭಾವ ನಿನ್ನ ಭಕ್ತರಿಗೊಂದು
ಆಲಾಪಬಂದರೆ ಪೇಳಕೊಂಬುವುದುಂಟು
ಪಾಲಸಾಗರ ಶಾಯಿ ಗೋಪಾಲ ವಿಠ್ಠಲ
ಪಾಲಿಸಬೇಕೆನ್ನ ಎಷ್ಟುರಮಾತಯ್ಯ ೪

ಆದಿತಾಳ

ಎನ್ನದು ಸಾಕಾಗಿ ಇನ್ನೊಂದು ಕೊಡು ಎಂದು
ನಿನ್ನ ಬೇಡುವದಿಲ್ಲ, ಘನ್ನ ದಯಾನಿಧೆ
ನಿನ್ನ ಭಕುತಜನಕಿನ್ನೊಂದು ದುರ್ಘಟ
ಬನ್ನ ಬಂದರೆ ನಿನ್ನ ಬೇಡುವುದು ಬಿಡೆ
ಇನ್ನು ಅಪರಾಧವನ್ನು ಮೊದಲು ಮಾಡಿ
ಎನ್ನ ನೀದಣಿಸಿದರಿನ್ನಂಜುವನಲ್ಲ
ಸಣ್ಣಪರಾಧಕೆ ಕಣ್ಣಿಗೆ ತೋರದೆ
ಮುನ್ನಡಗುವುದೆ ಚಿನ್ಮಯ ದೇವ
ಪನ್ನಗಶಯನ ಗೋಪಾಲ ವಿಠ್ಠಲ ಕೃಷ್ಣ
ನಿನ ಪರ ದಯವಿಡೆ ಇನ್ನೇನು ಮಾಳ್ಪೆಯೊ ೫

ಜೊತೆ

ಅ: ಧ ಅಪರಾಧ ಅಪರಾಧ ನಮೊ ನಮೊ
ಕೃ: ಡಿ ಸಲಹಯ್ಯ ಗೋಪಾಲ ವಿಠಲ

ಧ್ರುವತಾಳ

ಮೃತ್ಯುಕಾದಿಹುದಿನ್ನು ವ್ಯರ್ಥವೇತಕೆ ದಣಿವೆ
ಅರ್ತುಕೊ ಇದೇವೇಳೆ ಮರ್ತು ಕೆಡದೆ ಮುಂದೆ
ತೀರ್ಥಪಾದನ ಪಾದಕೀರ್ತನೆ ಮಾಡೊ ಮನದಿ
ಸ್ಫೂರ್ತಿಯ ಮಾಡುವನು ಸಾರ್ಥಕವಾಗಿ
ರಾತ್ರಿಹಗಲು ನಿದ್ರೆ ಮೂರ್ತಿಯ ಮರೆಯದೆ
ಗಾತ್ರ ಉಪಯೋಗ ಚಿಂತೆಯ ತೊರೆದು
ಅರ್ಥ ನಿನಗೆ ಮುಖ್ಯ ಅರ್ತುಕೊ ಯಾವುದೊಂದು
ವಾರ್ತೆಯ ಬಿಡು ಅನ್ಯ ಶ್ರೋತ್ರ ಜಿಹ್ವೆ ನಾಸಿಕ
ಮಾತ್ರಾದಿ ವಿಷಯದಲ್ಲಿ ಅರ್ತು ಸಾಧಿಸು ಹರಿಯ
ಮರ್ತರೆ ಮರೆವೆ ನೀನರ್ತರೆ ಅರಿವೆನೆಂಬ
ಸ್ಫೂರ್ತಿಬರುತಿರಲಿ ಆರ್ತನಾಗಿ ಶಾಸ್ತ್ರ
ಪ್ರತಿಪಾದ್ಯ ಯಾತ್ರೆಯು ಎಲ್ಲಾ
ತೀರ್ಥಂಗಳು ಇದರೊಳಗುಂಟು
ಮರ್ತು ಬಿಡಬೇಡವೊ ಶ್ರೀಹರಿಯ
ಕ್ಷೇತ್ರಜ್ಞನಾಮ ಸಿರಿ ಗೋಪಾಲ ವಿಠ್ಠಲ
ಮೂರ್ತಿಮಂತನಾಗಿ ಇಪ್ಪನೆಲ್ಲಸ್ಥಳದಿ ೧

ಮಠ್ಯತಾಳ

ಧನವೋದನವು ಇನ್ನು ಧನದೊಳಪ್ಪನ್ನೆ
ನೆನೆದು ತೆಗೆದುಕೊ ಶೋಧನಮಾಡಿ ನೀನು
ತನುವಿಗೆ ಕೆಲವಿತ್ತು ತನು ಬಂಧುಗಳ ನೋಡು
ಎಣಿಕೆಗೆ ತಂದು ನಾಲ್ಕು ಭಾಗ ಎಣಿಸುತಲಲ್ಲಿ
ನೆನೆ ಎಲ್ಲಾ ಸ್ಥಳದಲ್ಲಿ ಗುಣ ಹರಿಯೊಂದೆಂದು
ಅಣುಘನ ಪರಿಪೂರ್ಣ ಗೋಪಾಲ ವಿಠ್ಠಲ
ಅನಿಮಿತ್ತ ಬಂಧ್ವೆಂಬ ಗುಣವುಂಟವನಿಗೆ ೨

ರೂಪಕತಾಳ

ಒಂದು ಅರ್ಥವು ನಿನಗೆ ದೊರಕಿದಡಾಯಿತೆ
ಚೆಂದದಿ ಚಿಂತಿಸು ಅನಂತ ಪರಿಯಲ್ಲಿ
ಒಂದು ಭಾಗ ದೇವಸಮುದಾಯಕೆ ಕೊಡು
ಒಂದು ಭಾಗ ಪಿತೃಗಳಿಗೆ ಇನ್ನು ಮಾಡು
ಒಂದು ಭಾಗ ಪರಿವಾರ ಬಂಧುಗಳಿಗೆ
ಚೆಂದದಿ ಕೊಟ್ಟು ಆನಂದ ಉಣ್ಣು ಕಂಡ್ಯ
ನಂದ ಗೋಪನ್ನ ಕಂದ ಗೋಪಾಲವಿಠ್ಠಲನ್ನ
ಚೆಂದದಿ ನಿನ್ನ ಮನಮಂದಿರದೊಳು ತಿಳಿ ೩

ಝಂಪೆತಾಳ

ಜ್ಞಾನವೆ ಮುಖ್ಯಸಾಧನ ನಿನಗೆ ನೋಡು
ಏನು ಧನದಿಂದಾಹ ಕರ್ಮವದರೊಳಗುಂಟು
ಪ್ರಾಣಿ ಹಿತಕರ್ಮ ಮಾಡು ನಿತ್ಯ
ಶ್ರೀನಿವಾಸನು ಅದಕೆ ಮೆಚ್ಚುವನು
ಜ್ಞಾನಮಯ ಕಾಯ ಗೋಪಾಲವಿಠಲರೇಯ
ಕಾಣಿಸುವ ನಿನಗೆ ಕಾರುಣ್ಯವ ಮಾಡಿ ನಿರುತ ೪

ತ್ರಿಪುಟತಾಳ

ತನುವೆ ಮಂಟಪ ಮಾಡು ಮನವೆ ಪೀಠವು ಇಡು
ನೆನೆದು ಕುಳ್ಳಿರಿಸು ನಿನ್ನ ಒಳಗಿದ್ದ ಮೂರ್ತಿಯ
ಘನ ಆಹ್ವಾನಾಸನಾದಿಗಳ ನೆನೆದು ಅಲ್ಲಿಪ್ಪ
ಅಣು ಮಹಾಮೂರ್ತಿಗೆ ಅಭಿಷೇಕ ಮಾಡಿಸು
ಗುಣ ಮೂರರೊಳಗಿದ್ದ ಹರಿಯ ನೆನೆದು
ಚಿನಸು ವಸನಾಭರಣ ಧೂಪದೀಪವ ಮಾಡಿ
ನೆನೆ ಸುಗಂಧ ಪುಷ್ಪವನು ಮಿಕ್ಕಾದುದು ಎಲ್ಲ

ಗುಣ ಮೂರುವಿಧವ ಪದಾರ್ಥಗಳನೆಲ್ಲ
ನಿನಗೆ ಒಂದು ಉದಕ ಪಾತ್ರೆ ದೊರಕಿದರೆ
ಇನಿತು ಪರಿಯಲ್ಲಿ ಅದರಿಂದ ಚಿಂತಿಸು
ಧನದ ಪೂಜೆಗೆ ಅತ್ಯಾಯಾಸ ಪಡಲಿಬೇಡ
ಘನದೈವ ನಮ್ಮ ಗೋಪಾಲವಿಠಲರೇಯ
ನಿನಗಿಷ್ಟುಪರಿಯಲ್ಲಿ ಪೊರೆವನವನ ತಿಳಿ ೫

ಅಟತಾಳ

ಒಳಗೆ ಬಂದರೆ ನಿನ್ನ ಒಳಗೆ ಇರುತಲಿಪ್ಪ
ಸುಳಿಯುತಿಪ್ಪ ನಿನ್ನ ಸುತ್ತು ಬಿಡದೆ ಚೆನ್ನ
ಹಲವುಪರಿ ಕರ್ಮ ನಿನಗಾಗಿ ಮಾಡುತ್ತ
ಚೆಲುವ ನಿರ್ಲಿಪ್ತನ್ನ ತಿಳಿಯದೆ ಕೆಡುವ್ಯಾಕೊ
ಸುಲಭವಾಗಿ ಕರತಳದಲ್ಲಿ ಇದ್ದಂಥ
ಫಲವ ನೀ ಕಾಣದೆ ಬಲು ದಣಿವುದೇನೊ
ಗೆಳೆಯನಾಗಿ ಪಾರ್ಥಗೊಲಿದ ನಮ್ಮ ಸ್ವಾಮಿ
ಚೆಲುವ ಗೋಪಾಲವಿಠಲರೇಯನ ನೀನು
ಘಳಿಗೆ ಮರೆಯಬೇಡ ಬಲುಪ್ರಿಯ ಬಲುಪ್ರಿಯ ೬

ಆದಿತಾಳ

ಈವಾಗ ಆವಾಗ ಎಂಬುದು ಬೇಡವೊ
ದೇವನ ಸ್ಮರಣೆಯು ಬಾಹುದೆ ಕಾಲವು
ಪಾವಕ ಜಲದಲ್ಲಿ ಆ ವಾಯು ನಿಪ್ಪರು
ಆವ ಸೂರ್ಯ ಆವ ಅಧಿಷ್ಠಾನದಲ್ಲಿದ್ದು
ದೇವನ ಸ್ಮರಣೆಯು ಬರುತಿರಲಿ ಕಂಡ್ಯ
ಕಾವದೇವ ಬಿಡ ನಿನ್ನ ಗೋಪಾಲವಿಠಲ ೧

ಜೊತೆ

ಗೃಹಮೇಧಿ ಮಾಡಿ ನಿನ್ನ ಗೃಹದೊಳಗಿಪ್ಪಂಥ
ಶ್ರೀಹರಿ ಗೋಪಾಲವಿಠಲನ ನೆನೆಕಂಡ್ಯ

## ೮೫ ಮಡಿ ಸುಳಾದಿ

ಧ್ರುವತಾಳ

ಮಡಿ ಮಾಡಬೇಕು ಒಳ್ಳೆನಡತೆ ಕಲಿಯ ಬೇಕೆಂ
ವೆಡಹಿ ಮುಗ್ಗುತ ನೀರಮಡುವಿನೊಳಗೆ ಪೋಗಿ
ಬುಡುಗುಳಿಯಂತೆ ನಿಂದು ಗುಡುಗುಡುಗುಟ್ಟುತಲಿ
ನಡುವೆ ಮಂತ್ರಗಳು ಕಡುವೇಗ ಪಟ್ಟೆನಾಮ
ಬಡಿದು ಮುದ್ರೆಯಹಚ್ಚಿ ಜಡದೇಹ ತೊಳೆದು ನೀ
ಅಡಿಗಡಿಗೆ ಕಾಮಕ್ರೋಧ ಒಡಲೊಳು ಮಲಮೂತ್ರ
ಝುಡಿತ ರಕ್ತಮಾಂಸ ಕಡುಘೋರ ಇಂದ್ರಿಯಗಳು
ಕೊಡದೊಳು ಮಧ್ಯತುಂಬಿ ಮುಡಿಗೆ ಪೂಮಾಲೆ ಸುತ್ತಿ
ಕಡು ಪರಿಮಳದ್ರವ್ಯ ಸುಗಂಧ ಲೇಪಿಸಿ
ನಡು ಬೀದಿಯೊಳಗಿಟ್ಟು ಬೆಡಗು ತೋರಿಸಿ ಇನ್ನು
ಮಡಿ ಮಾಡಿದರದು ಮಡಿಯಾಗ ಬಲ್ಲುದೆ
ಕಂ-ಡೆಡೆಯಲ್ಲಿ ವ್ಯಾಪ್ತನಾದ ಗೋಪಾಲವಿಠಲನೆಂದು
ವೃಥ ನುಡಿಯನೊಮ್ಮೆ ನುಡಿದು ಮಡಿಮಾಡಿದವ
ನುಡಿವಂತ ಮಡಿವಂತ ಮಡಿವಂತನೊ ೧

ಮಠ್ಯತಾಳ

ಮಡುವಿನೊಳಗೆ ಇದ್ದ ಕರಿರಾಜನ ನೋಡು
ಕಡುಛಲ ಭಕುತ ಪ್ರಹ್ಲಾದನ ನೋಡು
ಅಡವಿಯೊಳ್ಬನಿಸಿದ ಧ್ರುವರಾಯನ ನೋಡು
ಕಡುಪಾತಕಿಯಾದ ಅಜಾಮಿಳನ ನೋಡು
ಎಡೆಯುಕೊಂಡೋಡಿದ ಹನುಮಂತನ ನೋಡು
ಕಡೆಮೊದಲಿಲ್ಲದ ಮುನಿಗಳನೆ ನೋಡು
ಕಡಲಶಯನ ಗೋಪಾಲವಿಠಲನ ನಾಮ
ನುಡಿದರಲ್ಲದೆ ಮಡಿ ಮಾಡಿದಣಿದರೆ ೨

ತ್ರಿಪುಟತಾಳ

ಗುರುಮುಖ್ಯವಿರಬೇಕು ಹರಿದೈವವೆನ್ನಬೇಕು
ಪರಉಪಕಾರ ಇರಬೇಕು ಪ್ರತಿಕ್ಷಣ
ಪರರು ತನ್ನವರು ಸಮರೆಂದು ತಿಳಿಯಬೇಕು
ಹಿರಿದು ಹಿಗ್ಗದೆ ತಾನಸ್ವತಂತ್ರನೆನಬೇಕು
ಪರಮಾಣು ಸ್ಥೂಳದಲ್ಲಿ ಹರಿವ್ಯಾಪ್ತನೆನ್ನಬೇಕು
ಈ-ಪರಿಯಲ್ಲಿ ತಿಳಿದರೆ ಅವನೆ ಮುಕ್ತಿಯೋಗ್ಯ
ಸಿರಿಯರಮಣ ನಮ್ಮ ಗೋಪಾಲವಿಠಲನ್ನ
ಕರುಣಕ್ಕೆ ಪಾತ್ರನಾದವನೆ ಇದನರಿವ ೩

ಅಟತಾಳ

ನಿತ್ಯ ಸಂಸಾರಿಗೆ ಅತ್ಯಂತ ದೂರವು
ದೈತ್ಯಗಂತು ಸ್ವಪ್ನದಲ್ಲಿ ನಾಸ್ತಿ
ಸತ್ವ ಜೀವರಿಗೆ ಹರಿ ಕರುಣವನ್ನೆ ಮಾಡಿ
ತತ್ವಾಭಿಮಾನಿ ದೇವತೆಗಳಿಗೆ ಪೇಳಿ
ವೊತ್ತ ದೋಷಂಗಳ ಕಲಿಯಾಧೀನಮಾಡಿ
ಉತ್ತಮ ಕರ್ಮಂಗಳ ಮಾಡಿಸಿ
ಸತ್ಯ ಲೋಕಾಧಿಪನ ಕಲ್ಪಾಂತರದಲ್ಲಿ
ಸತ್ವ ಜೀವಿಗಳು ವಿರಜೇಲಿ ಬ್ರಹ್ಮನ ಸಹ
ಮುಕ್ತಿಯೈದುವರು ಶಕ್ತ್ಯನುಸಾರದಿಂದ
ಸತ್ಯಸಂಕಲ್ಪ ಗೋಪಾಲ ವಿಠ್ಠಲನ
ಭೃತ್ಯರೆ ಧನ್ಯರೊ ಉತ್ತಮೋತ್ತಮರೊ ೪

ಆದಿತಾಳ

ಎತ್ತ ಪೋದರೇನು ಎತ್ತ ನಿಂತರೇನು
ಚಿತ್ತ ಬಂದಂತೆ ಚಿಗಿದಾಡಿದರೇನು
ಚಿತ್ತದಲ್ಲಿ ಹರಿಯಕಾಂಬುವ ಭಕ್ತರಿಗೆ

ಮತ್ತೆ ಇತರ ಜನರವರಿಗೆ ಸರಿಯೆ
ಮತ್ತೆ ವ್ಯಾಘ್ರನ ನೋಡಿ ನರಿ ಸುಟ್ಟುಕೊಂಡಂತೆ
ಚಿತ್ತಕ್ಕೆ ಬಂದ ಪರಿ ಪರಿಗಣನೆಯೇನೊ
ಉತ್ತಮೋತ್ತಮ ನಮ್ಮ ಗೋಪಾಲ ವಿಠಲನ
ಚಿತ್ತಾನುಸಾರ ನಡೆದವರೆ ಧನ್ಯರೊ ೫

ಜೊತೆ

ಆವಾವ ಕರ್ಮಗಳು ದೇವಗರ್ಪಿತವಾಗೆ
ಜೀವರೆ ಧನ್ಯರೊ ಗೋಪಾಲವಿಠಲ

## ೬೫ ಸುಳಾದಿ

ಧ್ರುವತಾಳ

*ಪ್ರಸ್ತ ಮಾಡುವಂಥ ಕರ್ತ ನಾನಲ್ಲವಯ್ಯ
ವಸ್ತು ಬೇರೆ ಇದ್ದಾನೆ ಒಳಗೊಳಗೆ ನೋಳ್ಪುದು
ಪುಸ್ತಕವಲ್ಲ ನಿದು ಬಿಚ್ಚಿ ತೋರುವುದಕ್ಕೆ
ವಿಸ್ತರಿಸಿ ನೋಡಿ ವಿವೇಕರು
ಅಸ್ತಮಾನುದಯತನಕ ಆದರಿವೆಯಾಗೊಬ್ಬ ಗೃ
ಹಸ್ಥ ನಮಗೆಲ್ಲರಿಗೆ ಒಡೆಯ ಕಾಣೋ
ಹಸ್ತದಿ ಕನ್ನಡಿ ಪಿಡಿದು ಕರ್ತೃತ್ವ ಎನಗೆಂದರೆ
ಹೊಸ್ತು ಹೋದಾವು ನಿಮ್ಮ ವಚನಂಗಳು
ಹೊಸ್ತಿಲ ಮುಂದೆ ನಿಂತು ಗೋವಿಂದ ಎಂದರೆ
ವಸ್ತುವೆನಿಸುವುದೆ ದೇವ ನಮಸ್ಕಾರಕ್ಕೆ
ಕಸ್ತೂರಿ ಭರಣಿಯೊಳು ಪರಿಮಳಯಚ್ಚಿದ್ದರೆ
ವಸ್ತು ಇದೇ ಎಂಬೋರೆ ಭರಣಿಯನ್ನು

---

* ಸಮಾರಾಧನೆ

ದುಸ್ತರ ನವುಗಿದು ಆಸ್ತಿಕ ತನದಿ ನೋಡಿ
ಸ್ವಸ್ಥದಲ್ಲಿ ಪೊದ್ದು ಯೋಚಿಸದೆ
ವಸ್ತುವಾಹನ್ನ ಗೋಪಾಲ ವಿಠಲನೆ
ಪ್ರಸ್ಥಮಾಡಿಸುವ ಬಗೆಯ ಕೇಳಿ ೧

ಮಠ್ಯತಾಳ

ಒಂದು ಜೀವನಲ್ಲಿ ಕರ್ತೃವಾಗುವನು
ಒಂದು ಜೀವನಲ್ಲಿ ಭೋಕ್ತೃವಾಗುವನು
ಒಂದೊಂದು ಪದಾರ್ಥದಲ್ಲಿ ತಾನೆಯಿದ್ದು
ಒಂದೊಂದು ರೂಪದಿ ಒಂದೊಂದಾಗಿ ಬಂದು
ಒಂದಕ್ಕೊಂದು ಭೋಗ ಒಂದು ವಿಷಯದಲ್ಲಿ
ಒಂದೇ ಒಂದಾಗುವನೊಂದರಲ್ಲಿ ನೋಡಾ
ಒಂದರ ದ್ವಾರದಿ ಒಂದಕ್ಕೆ ಫಲವೀವ
ಒಂದರಲ್ಲುಣಿಸುವ ಒಂದರಲ್ಲಿಪ್ಪ
ಒಂದರಲ್ಲಿ ಇಲ್ಲವೆಂಬ ವಚನಸಲ್ಲ
ಒಂದೆ ದೈವ ನಮ್ಮ ಗೋಪಾಲ ವಿಠಲ
ವಂದಿಸಿ ತಿಳಿದವರಿಗಾನಂದ ಬಡಿಸುವ ೨

ರೂಪಕತಾಳ

'ತಾ'ಯೆಂದೆನಿಸಿಕೊಂಡು ತಾನೆ ತಾಹುವನು
'ಬಾ'ಯೆಂದೆನಿಸಿಕೊಂಡು ತಾನೆ ಬಾಹುವನು
'ಪೋ' ಎಂದೆನಿಸಿಕೊಂಡು ತಾನೆ ಪೋಗುವನು
'ಕೋ' ಎಂದೆನಿಸಿಕೊಂಡು ತಾನೆ ಕೊಂಬುವನು
'ಅ'ಯೆಂದು 'ಕ್ಷ'ಯೆಂದು ಐವತ್ತೊಂದಕ್ಷರ
ಬಾಯಿಂದ ಉಚ್ಚರಿಸಿ ಕಾಯಶುದ್ಧಿಯ ಮಾಡಿ
ಮಾಯಾ ಪೊಂದಿಸದಂತೆ ತತ್ವಗಳ ತೋರಿಸಿ
ತಾಯಿಸುಕೊಂಬನು ತಡನಿಲ್ಲದೆ ಭಕುತಿ

ಬಾಯಿ ಬಡಿಯ ಭಕ್ತರಿಂದ ಆದ ಕರ್ಮ
ಬಾಯಿ ಬಡಿವ ಭಕ್ತರಲ್ಲದವರ ನಿನ್ನ
ನಾಯಕನಾಗಿ ಸರ್ವರಂತರಂಗದಿ ನಿಂತು
ನಿಯಾಮಕನಾಗಿ ನಿತ್ಯ ಕುಣಿಸ್ಯಾಡುವ
ಮಾಯಾರಹಿತ ದೇವ ಗೋಪಾಲ ವಿಠಲ
ತಾಯಿ ಲಾಲಿಸಿದಂತೆ ತನ್ನವರ ಪೊರೆವ ೩

ಝಂಪೆತಾಳ

ನಾನೆ ಕರ್ತನೆಂದು ನಾಲ್ಕು ದಿಕ್ಕುಗಳಿಂದ
ನಾನಾ ಪದಾರ್ಥಗಳನು ತರಿಸಿ
ಜ್ಞಾನವಿಲ್ಲದೆ ಯಜ್ಞ ಸ್ನಾನಗೋದಾನ ಭೂ
ದಾನ ಹಿರಣ್ಯದಾನ ಭೂಸುರರಿಗುಣಿಸೆ
ನಾನಾವ್ರತ ಚಾಂದ್ರಾಯಣಾಗಳನ್ನು
ಗಾನಗಾಯಿತ್ರಿ ಜಪಮಂತ್ರಗಳು
ಏನು ಏಸೊಂದು ಕರ್ಮಗಳ ಮಾಡಿದರು
ಶ್ರೀನಿವಾಸನು ಇದರಿಂದೊಲಿಯನು
ಕಾಣದಕರ್ಮವನಂತ ಮಾಳ್ಪುದಕ್ಕಿಂತ
ಜ್ಞಾನ ಪೂರ್ವಕದಿ ಗೆಲುವ ಯೋಚನೆ
ನೀನು ಎನ್ನ ಸ್ವಾಮಿ ನಾನು ನಿನ್ನ ಭೃತ್ಯನೆಂದು
ದೈನ್ಯಬಟ್ಟುದಕ್ಕೇನೇನು ಸಮಾನವುಂಟೆ
ದಾನವಾಂತಕ ಗೋಪಾಲ ವಿಠಲರೇಯ
ನೀನೆ ಗತಿಯೆಂದವಗೆ ನಿಜವ ತಿಳಿಸುವ ೪

ತ್ರಿಪುಟತಾಳ

ನಿತ್ಯದಲ್ಲಿ ನಿಷ್ಕಾಮಕರ್ಮಂಗಳ ಮಾಡೆ
ಪ್ರತ್ಯಕ್ಷದಲ್ಲಿ ತಾನಿಂತು ಫಲವೀವ
ಸತ್ಯ ಅವಕೆ ಫಲವಿತ್ತರೆ ತಪ್ಪೇನು

ಭಕ್ತರರಿಚ್ಛೆಗನಾಗಿ ಬಹುಬೇಗ ಒಲಿವನು
ಮತ್ತೊಂದು ಫಲಕ್ಕಾಗಿ ಮತ್ತೊಂದು ಕರ್ಮಮಾಡೆ
ದೈತ್ಯರ ದ್ವಾರದಿ ಫಲಗಳನೀವನು
ನಿತ್ಯವಲ್ಲವೊ ಅದು ತಾತ್ಕಾಲಿಕ ಸುಖ
ಚಿತ್ತಜನೈಯನ ಚಿತ್ತಹೀಗೆ
ಭಕ್ತರಾದವರಿಂಥ ಕರ್ಮಮಾಡಿದರೆ
ಕ್ಲುಪ್ತಿಗೆ ಕಡಮಿಲ್ಲ ಅಧಿಕಾನಂದವು ಹ್ರಾಸ
ಉತ್ತಮ ಅಪರೋಕ್ಷ ಆದಮೇಲಕೆ ಹೀಗೆ
ಆತುಮಾರ್ಥವಾಗಿ ಹಿಂದೆ ಮಾಡಿದ ಕರ್ಮ
ಜತ್ತಾಗಿ ಪ್ರಾರಬ್ಧ ಉಣ್ಣಿಸುವುದು ಸಂ
ಚಿತ ಆಗಾಮಿಯು ನಾಶವಹುದು ಕ್ಷಣದಿ
ಸತ್ಯಸಂಕಲ್ಪ ಗೋಪಾಲ ವಿಠಲನ್ನ
ಭಕ್ತರಿಗೆ ಕೇಡಿಲ್ಲ ಭಯವಿಲ್ಲವೊ ೨

ಅಟತಾಳ

ಒಂದು ಫಲವು ಒಬ್ಬನಿಂದಾದರೆ ಇನ್ನು
ಎಂದಿಗೂ ಅವನ ಉಪಕಾರ ಮರೆಯದೆ
ಬಂಧಕನವಗೆ ಅನಾದಿ ಕಾಲದಿಂದ ತನ್ನ
ಚೆಂದುಳ್ಳ ನೋಟದಿ ಆನಂದ ಬಡಿಸುವ
ಹಿಂದೆ ಮುಂದೆ ಅನಿಮಿತ್ತ ಬಾಂಧವನಾಗಿ
ಇಂದಿರಾಪತಿ ದಯಾಸಿಂಧು ಕರುಣಾಳು
ಕಂದರ್ಪ ಜನಕ ಗೋಪಾಲ ವಿಠಲನ್ನನೆನೆ
ಎಂದಿಗೂ ಮರೆಯದೆ ಮನಮಂದಿರದೊಳಗೆ

ಆದಿತಾಳ

ಮಾಡಿ ಬಲ್ಲ್ಯಾ ಒಂದದರಿಂದಲಿ
ನೋಡಿ ಬಲ್ಲ್ಯಾ ಒಂದದರಿಂದಲಿ

ಕೂಡಿ ಬಲ್ಲಾತ್ಯ ಒಂದದರಿಂದಲಿ
ಬೇಡಿ ಬಲ್ಲಾತ್ಯ ಒಂದದರಿಂದಲಿ
ಗಾಡಿಕಾರ ಗೋಪಾಲ ವಿಠ್ಠಲ ನೊ
ಕಾಡಿ ಬಲ್ಲಾತ್ಯ ಒಂದದರಿಂದಲಿ ೭

ಜೊತೆ

ಕರ್ತೃ ಎನಿಸುವ ನಮ್ಮ ಕರ್ತೃವೆ ತಾನಾಗಿ
ಸೂತ್ರಧಾರ ಗೋಪಾಲ ವಿಠಲ ಕಾಯ್ವ

೮೬ ರಾಗ ಕಾಂಬೋಧಿ ಝಂಪೆತಾಳ

ಸಂತೈಸು ತವದಾಸನೆಂತೆನ್ನನು ಪ

ಸ್ವಾಂತದಲಿ ನೆಲೆಸಿ ಏಕಾಂತ ಭಕ್ತೋತ್ತಮನೆ ಅ.

ವಾಗೀಶ ಮುನಿಕರಾಂಬುಜದಿಂದ ಸಂಭವಿಸಿ
ಆಗಮೋಕ್ತಾರ್ಥಗಳ ಶಿಷ್ಯರಾದ
ಭಾಗವತ ಜನರಿಗುಲ್ಲಾಸದಲಿ ಬಿಡದೆ ಚೆ
ನ್ನಾಗಿ ವ್ಯಾಖ್ಯಾನವನು ಪೇಳ್ದ ಗುರು ಸುರತರುವೆ ೧

ವೇದ ತೀರ್ಥಾನುಜರ ವಂಶಾಂಬುನಿಧಿ ಚಂದ್ರ
ಬಾಧಿಸುವ ದುಶ್ಶಾಸ್ತ್ರಗಳನೆ ಮುರಿದು
ವಾದದಿಂದಲಿ ಸಕಲ ಮೇದಿನಿಯೊಳಿಪ್ಪ ದು
ರ್ವಾದಿಗಳ ಭಂಗಿಸಿದೆ ಮಾಧವನ ಪ್ರಿಯನೆ ೨

ಕಲಿಕೃತಾಚರಣೆಗಳು ಬಲಿಯೆ ಹರಿಯಾಜ್ಞೆಯಿಂ
ದಿಳೆಯೊಳವತರಿಸಿ ಸಜ್ಜನರಿಗೆಲ್ಲ—
ತಿಳುಹಿ ಪರತತ್ವವನು ಶಾಸ್ತ್ರ ಮುಖದಿಂದ ಯತಿ
ಕುಲತಿಲಕ ನಂಬಿದವರಿಗೆ ನಿತ್ಯ ಸುರಧೇನು ೩

ಪಾದಚಾರಿಗಳಾಗಿ ತೀರ್ಥಯಾತ್ರೆಗಳ ಸ
ಮ್ಮೋದದಲಿ ಚರಿಸುತಲಿ ಚಮತ್ಕೃತಿಯಲಿ
ಸಾಧು ಸಮ್ಮತವಾದ ತೀರ್ಥ ಪ್ರಬಂಧವನು
ಆದರದಿ ರಚಿಸಿದ ಮಹಾ ದಯಾಂಬುಧಿಯೆ ೪

ಕ್ಷೋಭಕಾಲದಲಿ ಸಂಚರಿಸುತ್ತಲಿರಲು ಆ
ಹೋಬಲದಿ ನೈವೇದ್ಯ ಕಲಹದಿಂದ
ಕ್ಷೇಬಗರ ಮಿಶ್ರಿತಾನ್ನವನುಂಡು ಕರಗಿಸಿದೆ
ಶ್ರೀಭಾರತೀ ರಮಣನ-ಹರಿಯ ಕರುಣದಲಿ ೫

ಚಂದ್ರಿಕಾಚಾರ್ಯರಲಿ ಶಿಷ್ಯರೆಂದೆನಿಸಿ ಆ
ನಂದದಿಂದಲಿ ವ್ಯಾಸಪ್ರತೀಕವನ್ನು
ತಂದು ನಿರ್ಭಯದಿ ಸರ್ವತ್ರದಲಿ ಮೆರೆದೆ ಯೋ
ಗೀಂದ್ರ ದಂಡಕಷಾಯ-ಧರಿಸಿದ ಗುರುವೆ ೬

ಅಂಕದಲ್ಲಿದ್ದ ಬಾಲಕನ ಬರುತಲೆ ಕಂಡು
ಶಂಖ ಚಕ್ರಾಂಕಿತನು ಈತನೆಂದು
ಶಂಕಿಸದೆ ಎನಗೆ ಪ್ರಾಗ್ಜನ್ಮದಲಿ ಪೇಳ್ದ ಅಕ
ಳಂಕ ಸನ್ಮಹಿಮ ಹಯಮುಖನ ದಾಸಾಗ್ರಣಿಯೆ ೭

ಮಾರಪಿತ ನೀರಜಾಸನ ತೀವ್ರಗಮನ ಪ
ದ್ಮಾರಿ ಮೌಳಿಗಳಿಂದ ಸಹಿತರಾಗಿ
ಸಾರ ಶ್ವೇತದ್ವೀಪದೊಳಗಿಪ್ಪ ತೆರನಂತೆ
ಧೀರವೃಂದಾವನದಿ ತೋರುವೆ ನಿರಂತರದಿ ೮

ಸನ್ಮಹಿಮ ವೇಣುಗೋಪಾಲ ವಿಠ್ಠಲ ಯದುವ
ರೇಣ್ಯನ ಕೃಪಾಪಾತ್ರನೆಂದೆನಿಸುವ
ಘನ್ನ ಋಜುಗುಣದೊಳಗೆ ಮಾನ್ಯನಾಗಿಹ ಸುಪ್ರ
ಸನ್ನ ದ್ವಿಜಕುಲರನ್ನ ನಂಬಿದೆನೊ ನಿನ್ನ ೯

೬೨ ರಾಗ ಆನಂದ ಭೈರವಿ ಅಟತಾಳ

ನಂದಗೋಪನ ಕುಮಾರಿ
ಇಂದಿರೆ ಆನಂದಕಾರಿ
ಸುಂದರಾಂಗ ನರಸಿಂಗನ ಪಟ್ಟದರಾಣಿ ಪ.

ಕುಂಚಿತ ನೀಲಕುಂತಳೆ
ಕುಂಕುಮ ಶೋಭಿತಫಾಲೆ
ಚಂಚಲ ಚಕೋರಾಂಬಕ
ಚಂಪಕನಾಸಿಕೆ
ಪಂಚಪಾಂಡವ ಪಾಲಿಕೆ
ಪಾಹಿರಮಾದೇವಿ ಬರ್ಹಿ
ಪಿಂಛಲಾಂಛನೆ ದುರ್ಗೆ ಭಕ್ತವಾಂಛಿತದಾಯಿ ೧

ರಕ್ತ ಚಂದನಲಿಪ್ತಾಂಗೆ
ರಾಜಿತ ಕುಂಡಲ ಕರ್ಣೆ
ರಕ್ತ ಮಾಲ್ಯಾಂಬರಧರೆ
ಕೇಯೂರ ಹಾರೆ
ರಕ್ತ ಫುಲ್ಲಾಂಭೋಜನೇತ್ರೆ
ರಮಣ ವಕ್ಷಾಂಕ ಕ್ಷೇತ್ರೆ
ರಕ್ತಾಧರೋಷ್ಠ ಪಾದಪಾಣಿ, ಕಲ್ಯಾಣಿ ೨

ಅಷ್ಟ ಬಾಹು ಬ್ರಹ್ಮಚಾರಿ
ಅಂಬರ ಭೂಮಿ ವಿಹಾರಿ
ಅಷ್ಟಾಯುಧಃದಿವ್ಯಧಾರಿ
ಅಸುರಾರಿ ಎನ್ನ
ಕಷ್ಟ ಬಾಹಿರಂತರ ಶತ್ರು
ದುಷ್ಟರ ದೂರ ಓಡಿಸಿ
ಶ್ರೇಷ್ಠಸಂಗ ವಿಷ್ಣುಭಕ್ತಿ ಕೊಟ್ಟು ರಕ್ಷಿಸೆ ೩

ಭರ್ಗ ಬ್ರಹ್ಮಾದ್ಯ ನಿಮಿಷ
ವರ್ಗ ಸಂಸೇವಿತೆ ದೇವಿ
ಸ್ವರ್ಗಾಪವರ್ಗ ಪ್ರದಾತೇ
ಸರ್ವಾಭೀಷ್ಟ ದಾತೇ
ದುರ್ಗಮ ಭವಾಬ್ಧಿಯಿಂದ
ನಿರ್ಗಮಗೈಸು ನಂಬಿದೆ
ಭಾರ್ಗವಿ ಶ್ರೀದುರ್ಗೆ ಜಗತ್ಸರ್ಗಾದಿ ಕರ್ತ್ರೀ ೪

ವಾರಿರೂಪಿ ನಿನ್ನ ಪರಿ
ವಾರದ ಭಯವೆಂದೆಂದು
ತಾರದಿರೆ ಎನ್ನ ಕುಲಕೆ
ತಾಯಿ ನಂಬಿದೆ
ಘೋರ ಅನಾದಿ ಅವಿದ್ಯಾ
ಹಾರ ಹೊಯ್ದು ಹೃದಯದಿ
ತೋರೆ ಶ್ರೀಗುರು ಗೋಪಾಲವಿಠಲ ಸಂಪ್ರಿಯೆ ೫

೮೮ ರಾಗ ಪಂತುವರಾಳಿ ರೂಪಕತಾಳ

ನಾಚಿಕಿಲ್ಲವೋ ಎನಗೆ ನಾಚಿಕಿಲ್ಲವೋ ಪ.

ಸೂಚಿಸಿದರೂ ತಿಳಿಯದಲೇ
ಯೋಚಿಸುವೆನು ವಿಷಯಗಳನು ಅ.

ಮೃತ್ಯುಬಾಯ ಒಳಗಿನಿಂದ
ಕಿತ್ತುತಂದ ಕರುಣಿ ಪುರು
ಷೋತ್ತಮನ್ನ ನೆನೆಯದಲೆ
ಹೊತ್ತುಗಳೆದೆ ಹರಟೆಯಿಂದ ೧

ಗೇಣುಹೊಟ್ಟೆಗಾಗಿ ಪೋಗಿ
ಗಾಣದೆತ್ತಿನಂತೆ ತಿರುಗಿ
ಕೋಣನಂತೆ ತಿಂದು ಬಲಿತು
ಧೇನಿಸದಲೆ ನಿನ್ನ ಮರೆತೆ ೨

ಬಂದ ಕಾರ್ಯ ಒಂದು ಇವ
ನಿಂದ ಆಗಲಿಲ್ಲವೆಂದು
ಮಂದಹಾಸದಿಂದ ದೇವ
ವೃಂದ ನೋಡಿ ನಗುತಲಿಹುದು ೨

ಲೋಲತನದಿ ಕಾಲಕಳೆದೆ
ಕಾಲಗಂಜದೆ ಕರುಣಿ ನೀ ಕೃ
ಪಾಳು ಎಂಬೊದಲ್ಲ ದೆನ್ನ
ಆಳುತನವ ಪೇಳಲೇನು ೪

ಪಿಡಿದವೋಲೆ ಬಿಡುವನಲ್ಲ
ಬಡವನಲ್ಲ ಬೇಡಿದುದನು
ಕೊಡುವ ಲಕ್ಷ್ಮಿಯೊಡೆಯ ನೀನು
ಎಡರ ತೊಡರ ಬಿಡಿಸಿ ಸಲಹೊ ೫

ಹಿಂದೆ ಹೋದ ಜನ್ಮವೇನು
ಮುಂದೆ ಬಾಹ ಜನ್ಮವೇನು
ಇಂದುವೋದ ಮುನಿಯುಮತವ
ಪೊಂದಿದುದರ ಚಂದವೇನು ೬

ವರದಗೋಪಾಲ ವಿಠಲ
ಧೊರೆಯೆ ಎನ್ನ ಅವಗುಣಗಳ
ಮರೆದು ಕರುಣದಿಂದ ಪೊರೆಯೊ
ಕರವಮುಗಿವೆ ಶರಣಾಭರಣ ೭

## ೮೮ ಸುಳಾದಿ

### ಧ್ರುವತಾಳ

ಅಜಭವಸುರ ಮಕುಟ ಸಂಘಟಿತದ
ರಜದಿಂದ ವಿರಾಜಿತ ಚರಣ

ನಿಜಸತಿ ಶ್ರೀವನಿತೆ ಕರಾಂಬುಜಗಳಿಗೊಪ್ಪುವ
ಕುಚ- ಕುಂಕುಮಾಂಕಿತಚರಣ
ಗಜಮುಖನೈಯನ ಮೌಳಿಯನಾ
ಕಜನ ನಿಮ್ನಗಾಪಡೆದ ಶ್ರೀಚರಣ
ದ್ವಿಜಪತಿ ಆಂಜನೇಯರ ಕರಾಂ
ಬುಜಗಳಲೊಪ್ಪುವ ಶುಭಚರಣ
ಧ್ವಜವಜ್ರಾಂಕುಶ ಹಲಯುವಃಅಂ
ಬುಜ ರೇಖೆಯಿಂಲಾಂಛಿತ ಚರಣ
ಕುಜನ ಕೈರವ ನಿಕರಾಂಬುಜ ಸಖ ಮಾಧ್ವಂದಿನ ಚರಣ
ಭುಜಗಾಚಲ ವಲ್ಲಭ ವೇಂಕಟ
ಗುರು ಗೋಪಾಲ ವಿಠ್ಠಲ
ತ್ರಿಜಗೇಶ್ವರ ಎನ್ನ ಹೃದಯಾಂ
ಬುಜದಲ್ಲಿ ನಿಲ್ಲಿಸೊ ನಿನ್ನ ಚರಣ ೧

ಮಠ್ಯತಾಳ

ಪದ ಯೋಗ ತಪಸು ಜ್ಞಾನ ಮಹಾಜ್ಞಾನ
ಮೊದಲಾದ ಐವರೊಳೊಂದು ಸಾಧ
ನದ ಹಾದಿಯನರಿಯೆ ನಾನು ನಿನ್ನ ಶ್ರೀ
ಪದ ಭಜನೆಯು ಬೇಡಿಬಯಸಲು ವಿ
ನೋದಮಾಡಿ ನಗರೆ ಸಜ್ಜನರು
ಕ್ರೋಧ ಲೋಭ ಶೀಲ ಸತತ ಪರ
ರಾಧನ ಲೋಲ ಜಾತನೊ
ಖೇದಕ್ಕೆ ನಿದಾನಕರ್ಮವನೆಸಗಿ
ಮೋದ ಪರಂಪರೆಯ ಬಯಸುವೆ
ಯಾದವ ಕುಲಾಬ್ಧಿ ಚಂದಿರನೆ
ಹೇ ದಯಾಬ್ಧಿ ಶ್ರೀನಿವಾಸನೆ
ನೀ ದಯದಿಂದೆನ್ನ ಸಲಹಬೇಕು

ಉದರಪಾದ ಶೈಲಸದನ ಶ್ರೀಹರೇ
ಅಪರಿಪರ ನಾ ಕಾಣದೆ ನಿನ್ನ
ಪಾದಕಮಲದ ನೆಳಲಸಾರಿದೆ
ನೋದಪೂರ್ಣ ಗುರು ಗೋಪಾಲ ವಿಠ್ಠಲ ೨

ರೂಪಕತಾಳ

'ಯಮೇವೈಷ ವೃಣುತೇ ತೇನಲಭ್ಯಃ' ಎಂಬ ನಿ
ಗಮದುಕ್ತಿಯನಿಲ್ಲಿ ಸಫಲವಮಾಡೆಲೊ ಸ್ವಾಮಿ
ಶಮದಮ ಯಮನಿಯಮಾದಿ ಸಾಧನವೆಲ್ಲಾ
ತಮದಲ್ಲಾತುಮನಾಗಿ ನಿಂತು ಮಾಡಿಸ ಮಾಯಾ
ರಮಣನೆ ನೀನೊಲಿಯಲು ಪ್ರಾಪ್ತಿಸದ್ದೊಂದಿಲ್ಲ
ಸುಮಹಿಮ ನಿನ್ನ ಕರುಣವೆ ಮುಖ್ಯವೊ
ಮಮಸ್ವಾಮಿ ಹೃತ್ಪತ್ತಮಸಖ ಪ್ರಿಯಬಂಧು
ಪರಮಪ್ರಾಣ ಗುರು ನಮೋ ನಮೋಶೇಷ
ಕ್ಷಮಾಧರೇಶ ಕಮಲೇಶ ಶ್ರೀ
ಗುರು ಗೋಪಾಲ ವಿಠ್ಠಲ ನಿ
ಗಮ ವಂದ್ಯ ಒಲಿದೆನ್ನ ಸಲಹೊ ಸ್ವಾಮಿ ೩

ಝಂಪೆತಾಳ

ನಿನಗೆ ಎದುರಾರೊ ನೀಮಾಡೆ ಮುರಿವಸ್ವಾರೊ
ಅಣಿಮಾಡಿದ್ದು ಕೆಡಿಸೆ ಮತ್ತುಳಿಸುವರಾರೊ
ವನಜಜಾಂಡ ಸೃಜಿಸಿ ಪಾಲಿಸಿ ಕೆಡಿಪಧೀರ
ತೃಣ ಮೇರುಮಾಳ್ಪೆ, ತೃಣಮಾಳ್ಪೆ ಮೇರುವನ್ನು
ವನಜಭವ ಭವಾದಿಗಳಿ ಜನನಾದಿಬಂಧ ಮೋ
ಚನಮಾಡಿ ನಿಜಸುಖವನುಭವವೀವೆ
ಅನಲನಿಂದುದಕ ಪುಟ್ಟಿಸಿದ ಅಘಟಿತ ಘಟಿತ
ಅನಂತೈಶ್ವರ್ಯ ಹರೇ ಅಪ್ರಮೇಯ

ಕ್ಷಣದೊಳಗೆ ಸಿದ್ಧರನುಮಾಳ್ಪೆ ನೀನೊಲಿಯಲು
ಮನಕೆಬಾರದಿರೆ ಸುಮ್ಮನೆ ನೋಡುವೆ
ನಿನಗಲ್ಲದೀಶಕ್ತಿ ಸಲ್ಲದಿನ್ನೊಬ್ಬರಿಗೆ
ಮನಕೆ ಅನುಭವ ಸರ್ವಸಜ್ಜನ ಸಮ್ಮತ
ಫಣಿಶೈಲಸದನ ಗುರು ಗೋಪಾಲ ವಿಠ್ಠಲ
ಮಣಿದು ನಮಿಸುವೆ ಒಲಿದು ಸಲಹೊ ಸ್ವಾಮಿ ೪

ತ್ರಿಪುಟತಾಳ

ಆ ಮಹಾ ಕಾಲ ಕರ್ಮ ವಿದ್ಯಾಚಾಲ
ಭೂ ಮೊದಲು ಭೂತೈದು ಮರೆಯು
ಈ ಮನಸು ದಶಹೃಷೀಕದಧಿಪರು ಕರಣಗಳಲ್ಲ
ನೇಮಿಸಿದಂತೆ ಸಾಧನ ಮಾಡಿಪರಲ್ಲದೆ
ಭೂಮಿಯೊಳು ಬೇರೆ ಸ್ವಾತಂತ್ರ್ಯವುಂಟೆ
ಈ ಮನೋಹರ ನೀನೆ ಬಂಧಕನೋಚಕನು
ಈ ಮೂಲವನರಿಯು ! ಸ್ವಭಾವದಲ್ಲಿ
ಭ್ರಾಮಕನಾಗಿ ಸಂಚರಿಸುವೆನೆನ್ನನು
ಪ್ರೇಮದಿಂದ ಕರಪಿಡಿದು ಸಲಹೊ ಸರ್ವೇಶ
ಸ್ವಾಮಿ ಸರೋವರ ತೀರವಾಸ ತ್ರಿ
ಧಾಮ ಗುರು ಗೋಪಾಲ ವಿಠ್ಠಲ
ಕಾಮಿತಪ್ರದ ಕರುಣಿ ನಿನ್ನ ಸುನಾಮವನೆ ನುಡಿಸೊ ೫

ಅಟತಾಳ

ದಕ್ಷಿಣಾಮನೋಹರ ಲಕ್ಷ್ಮಣಾಗ್ರಜ ನಮೊ
ದಕ್ಷಿಣಾಕ್ಷಿಯಲ್ಲಿಪ್ಪ ಸ್ಥೂಲಭುಕ್ಸ್ವವೆ ನಮೋ
ದಕ್ಷಾರಿಸಖನೆ ಕಂಠಗತೈಜಸ ನಮೋ
ಲಕ್ಷ್ಮೀವಕ್ಷನೆ ಹೃದಯಸ್ಥಪ್ರಾಜ್ಞನೆ ನಮೊ
ಮೊಕ್ಷದಾಯಕ ತುರೀಯನೆ ನಮೊ

ಸಾಕ್ಷಿಚೇತನ ನಿರವಧಿಕಸುಖನೆ ಸರ್ವಾ
ಧ್ಯಕ್ಷನೆ ಎನ್ನ ಬಿನ್ನಪವಿದು ಲಾಲಿಸು
ಚಕ್ಷುವೆ ಮೊದಲಾದ ಸರ್ವ ಇಂದ್ರಿಯಗಳು
ಈಕ್ಷಣ ಶ್ರವಣ ಅದನಾಘ್ರಾಣಾಲಿಂಗನಾದಿ
ಮೋಕ್ಷಕ್ಕೆ ಪ್ರತಿಕೂಲವಾದ ದುರ್ವಿಷಯರುವ
ಪೇಕ್ಷಿಸುತ್ತಿದೆ ಸತತ ಶಿಕ್ಷಿಸಿ ಗೆಲಲೆನಗೊಶವಿಲ್ಲ
ದಕ್ಷಕ ನಿನಗೆ ಮೊರೆಯನಿಟ್ಟೆ ಕರುಣಾಳೊ
ಸಾಕ್ಷಿಮಾತ್ರವು ಇದನೊಪ್ಪದೆ ನಿನ್ನನ
ಪೇಕ್ಷಿಸುತ್ತಿದೆ ಹರಿಯೆ
ರಕ್ಷಿಸಬೇಕೆನ್ನ ನಾನು ನಿನ್ನ ವರವ
ಚಕ್ಷುಶ್ರವಣ ಗಿರೀಶ ಸರ್ವಾಪ
ರೋಕ್ಷಿ ಸರ್ವೇಶ ಗುರು ಗೋಪಾಲ ವಿಠ್ಠಲ
ಸೂಕ್ಷ್ಮಭಕ್ತರ ಪಕ್ಷ ಪಾಲ ಒಲಿದು ಕಾಯೊ ೬

ಆದಿತಾಳ

ತನುನಿನ್ನಯ ಬಂಧುರ ಚರಣತಕ್ಕೈಸಲಿ
ಅನುಕಾಲ ಕಿವಿ ನಿನ್ನ ಮಹಿಮೆಯ ಕೇಳಲಿ
ಅನಘ ನಿನ್ನ ಕೊಂಡಾಡಲಿ ನಾಲಿಗೆ
ಮಣಿದು ನಮಿಸಲಿ ಶಿರ ನಿನ್ನ ಚರಣಕ್ಕೆ
ಮನಸು ಸತತ ನಿನ್ನ ಸುಕ್ರಿಯ ರೂಪವ
ನೆನೆದು ಸುಖವಗೊಳ್ಳಲಿ ಆವಾಗಲಿ
ಇನಿತಲ್ಲದೆ ನಾನಾ ವಿಷಯಗಳನ್ನು
ಕನಸಿಲಾದರೂ ನೆನೆಸದ ತೆರಮಾಡೈಯ
ಎನಗೆ ನಿನ್ನೊಲಿಸಲು ತಿಳಿದು ತಿಳಿಯದು
ನಿನಗೆ ನೀ ದಯಮಾಡಲಿ ಬೇಕು
ಅನಿಲಾಶನ ಶೈಲಾಧಿಪ ಹರಿ ಮಾ
ಮನೋಹಾರಿ ಗುರು ಗೋಪಾಲ ವಿಠಲ ನಿನ್ನ
ಮನದಲ್ಲಿದ್ದದ್ದೆ ಮಾಡೈಯ ಎನಗದೇ ಸಮ್ಮತ ೭

ಜೊತೆ

ದೋಷಗಳೆಣಿಸದೆ ನೀನೊಲಿದು ಪಾಲಿಸೊ
ಶೇಷಪರ್ವತನಾಥ ಗುರು ಗೋಪಾಲ ವಿಠಲ

೨೬೯ ರಾಗ ಧನ್ಯಾಸಿ ಅಟತಾಳ

ಶರಣ ಜನರನ್ನು ಪೊರೆವ ಭಾರತಿ ನಿನ್ನ
ಚರಣಕ್ಕೆರಗುವೆ ಕೈ ಮುಗಿವೆ ಪ.
ಕರೆಕರೆಗೊಳಿಸುವ ಕಠಿಣ ಭವವನೆಲ್ಲ
ಪರಿಹರ ಮಾಡಬೇಕು-ಪರಾಕು ಅ.

ತುತಿಯುಮಾಡುವೆ ನಿನ್ನ ಸುತನ ಭಿನ್ನಪವನ್ನ
ಅತಿಶಯದಿ ಕೇಳಬೇಕು,-ಈ ವಾಕು
ನುತಿವಂತ ಜನರೆನ್ನ ಮಾನ್ಯ ಗೊಳಿಸುವಂಥ
ಜಿತವಾದ ಭಾಗ್ಯವೀಯೇ-ನೀಕಾಯೇ ೧

ಕಾಮಾದಿಗಳನೆಲ್ಲ ನೇಮದಿ ಗೆಲುವಂಥ
ಪ್ರೇಮಕವಚ ತೊಡಿಸೇ, ಉದ್ಧರಿಸೇ
ಹೇಮಕಾಮಿನಿ ಭೂಮಿ ಹೇಯವೆಂದೆನ್ನಿಸೆ
ಸೋಮಶೇಖರನ ಜನನಿ-ಸುಜ್ಞಾನಿ ೨

ಮಾತೆ ಎನ್ನದು ಒಂದು ಮಾತು ಲಾಲಿಸುವುದು
ವಾತನ ನಿಜ ದಯಿತೆ, ಪ್ರಖ್ಯಾತೆ
ದಾತ ಶ್ರೀವರದ ಗೋಪಾಲ ವಿಠ್ಠಲನ್ನ
ಆತುಮದೊಳು ನಿಲಿಸೆ-ಸುಮನಸೆ ೩

೨೭೦ ರಾಗ ಕಾಪಿ ಝಂಪೆತಾಳ

ಕರುಣಿ ಕಾಯೊ ರಾಘವೇಂದ್ರ ಗುರುವೆ ಪ.
ನೆರೆನಂಬಿದವರ ಕಾಮಿತ ಕಲ್ಪತರುವೆ ಅ.

ತೀರ್ಥಪಾವನ ಪಾದ ಪಂಕಜ ಭೃಂಗ
ಧೂರ್ತವಾದಿಗಳಂಧತಿಮಿರ ಪತಂಗ
ಕಾರ್ತಸ್ವರಲೋಷ್ಟ ಸಮಚಿತ್ತ ಸಂಗ
ಆರ್ತಜನರ ಪಾಲ ಅತಿದಯಾಪಾಂಗ ೧
ಸೋತ್ತಮರಾನಿಷ್ಟ ಪುಣ್ಯವೆಂಬೋದು
ಭೃತ್ಯರ ಸುಖಕೆ ಕಾರಣವಾಗಿಹುದು
ಕ್ಲೃಪ್ತವಾಗಿದೆಯೆಂದು ನಂಬಿದೆ ಇಂದು
ಇತ್ತು ಪಾಲಿಸಬೇಕು ದೀನಜನರ ಬಂಧು ೨
ಗುರುವಂಶ ಮಧ್ವಮತಾಬ್ಧಿ ಚಂದಿರನೆ
ದುರಿತ ಜೀಮೂತ ಪ್ರಚಂಡ ಮಾರುತನೆ
ಪರಮ ಕಲ್ಯಾಣ ಸದ್ಗುಣ ರತ್ನಾಕರನೆ
ಗುರು ಗೋಪಾಲ ವಿಠಲನ ಚರಣ ಭಜಕನೆ ೩

## ೯೧ ಉಗಾಭೋಗ

ಎಲ್ಲಿನೋಡಲು ನೀನಿಲ್ಲದ ಸ್ಥಳವಿಲ್ಲ
ಎಲ್ಲದರಲಿ ನೀನು ಎಲ್ಲ ಪ್ರೇರಕ ನೀನು
ಎಲ್ಲಕ್ಕೆ ಭೇದ ಎಲ್ಲಾ ನಿರ್ಲೇಪ
ಚಿಲ್ಲರೆ ದೈವರ ಗಂಡ ಗೋಪಾಲ ವಿಠ್ಠಲ ನಿನ್ನ
ಬಲ್ಲವರೆ ಬಲ್ಲರು ಕಾಣೆನೊ ಪೂರ್ಣರೇಯ

## ೯೨ ವಿಶ್ವರೂಪ ಸುಳಾದಿ

### ಧ್ರುವತಾಳ

ಒಂದು ರೂಪವನೋಡೆ ಅನಂತ ಪೂರ್ಣ ಇನ್ನು
ಒಂದು ಅವಯವವೆ ಪೂರ್ಣವಯ್ಯ
ಒಂದು ರೂಪದೊಳಗೆ ಅನಂತ ರೂಪಗಳು
ಒಂದು ರೂಪದಿಂದ ಭೇದಾಭೇದನಾಗಿಪ್ಪ

ಒಂದು ಧನುರ್ಧರ ಒಂದು ಅರಿಶಂಖಧರ
ಒಂದು ಚತುರ್ಭುಜ ಒಂದು ದ್ವಿಭುಜರೂಪ
ಒಂದು ಚತುರಹಸ್ತ ಒಂದು ದ್ವಿಹಸ್ತ
ಒಂದು ಏಕಮುಖ ಒಂದು ಚತುರಮುಖ
ಒಂದು ಸಾಸಿರಮುಖ ಒಂದು ಗಜಮುಖ
ಒಂದು ಮತ್ಸ್ಯಮುಖ ಒಂದು ಸೂಕರಮುಖ
ಒಂದು ಕ್ರೂರಮುಖ ಒಂದು ಶಾಂತಮುಖ
ಒಂದು ಶ್ಯಾಮವರ್ಣ ಒಂದು ರಕ್ತವರ್ಣ
ಒಂದು ಪೀತವರ್ಣ ಒಂದು ಶುಭ್ರವರ್ಣ
ಒಂದು ಜಯಪ್ರದ ಒಂದು ಅಭಯಪ್ರದ
ಒಂದು ಅಣುವಾಗಿಪ್ಪುದು ಒಂದು ಮಹತ್ತಾಗಿಪ್ಪುದು
ಒಂದು ಕುಳಿತಿಪ್ಪುದು ಒಂದು ನಿಂತಿಪ್ಪುದು
ಒಂದು ಕೇವಲ ಲಘು ಒಂದು ಮಹಾಗುರು
ಒಂದು ಕಡೆ ಓಡ್ಯಾಟ ಒಂದು ಕಡೆ ಸಂಹಾರ
ಒಂದು ಕಡೆ ಸೃಷ್ಟಿಯು ಒಂದು ಕಡೆ ಪಾಲನೆ
ಒಂದು ರೂಪದಲ್ಲಿನ್ನು ನಿಂದು ನಾನಾ ವೈಚಿತ್ರ್ಯ
ನಾಗಿ ತೋರುವ ದೈವ
ಸುಂದರ ಮೂರುತಿ ಗೋಪಾಲ ವಿಠಲ
ಒಂದೊಂದನಂತರೂಪ ಅನಂತ ಒಂದೆ ರೂಪ

ಮತ್ಯತಾಳ

ಒಂದು ರವಿಯು ತೇಜ ಒಂದು ದ್ವಿರವಿ ತೇಜ
ಒಂದಕ್ಕೊಂದು ಅಧಿಕ ಹತ್ತುರವಿಯು ತೇಜ
ಒಂದು ಬಲ ಜ್ಞಾನ ಪೂರ್ಣವಾದ ರೂಪ
ನಿಂದಿವೆ ಮಲಗಿವೆ ಮಲಗಿ ತಿರುಗಿವೆ
ಪೊಂದಿಕೊಂಡಿಹವೇಕವೆಂದಿಗೂ ಭೇದಗಳಿಲ್ಲ
ಮಂದ ಜನರ ಮನಕೆ ಮಹಾಕಳಂಕ

ಗಂಧಾದಿ ಶಬ್ದವೆಲ್ಲ ಸ್ವರೂಪ ಭೂತ
ಇಂದ್ರಿಯಗಳೆಲ್ಲ ಒಂದೊಂದು ಪೂರ್ಣವು
ಪೊಂದಿಪ್ಪವು ನೋಡಾನಂತ ಬೊಮ್ಮಾಂಡಗಳು
ಇಂದಿನ ಅತೀತಾನಾಗತವೆಲ್ಲ
ಒಂದೊಂದು ರೂಪದಿ ಪೊಂದಿಕೊಂಡಿಪ್ಪವು
ಒಂದು ಆದರು ಅಂತ ಕಂಡೆನೆಂಬುವನಾರು
ನಂದನಂದನ ಕಂದ ಗೋಪಾಲವಿಠ್ಠಲ
ಬಂದುತೋರುವ ತತ್ತದ್ಯೋಗ್ಯತೆಯನುಸಾರ ೨

ರೂಪಕತಾಳ

ಒಂದುಕಡೆಯಲ್ಲಿ ರಾವಣನ ಸಂಹಾರವಮಾಡುವ
ಒಂದುಕಡೆಯಲ್ಲಿ ತತ್ವಜ್ಞಾನವ ಬೋಧಿಸುವ
ಒಂದುಕಡೆಯಲ್ಲಿ ತುರುಗಳನು ಕಾಯುವ
ಒಂದುಕಡೆಯಲ್ಲಿ ಕ್ರೂರಜನರ ಸದೆಬಡಿಯುವ
ಒಂದುಕಡೆಯಲ್ಲಿ ಕುರುಪಾಂಡವರ ಕಡಿದಾಡಿಸುವ
ಒಂದುಕಡೆಯಲ್ಲಿ ಗೋಪಸ್ತ್ರೀಯರ ಒಡನಾಡುವ
ಒಂದುಕಡೆಯಲ್ಲಿ ಗೋವರ್ಧನ ಗಿರಿಯನೆತ್ತುವ
ಒಂದುಕಡೆಯಲ್ಲಿ ಬ್ರಹ್ಮಾದ್ಯರಿಂದ ಪೂಜೆಯಗೊಂಬ
ಒಂದುಕಡೆಯಲ್ಲಿ ಕಂಸನ್ನ ದಹನಮಾಡುತಿಪ್ಪ
ಒಂದುಕಡೆಯಲ್ಲಿ ಯಶೋದೆಯ ಮುಂದಾಡುತಿಪ್ಪ
ಒಂದುಕಡೆಯಲ್ಲಿ ಪಾಲುವೊಸರು ಕದ್ದುತಿಂದು
ಇಂದುಮುಖಿಯರ ಮುಂದೆ ಇಲ್ಲೆಂದಾಡುತಿಪ್ಪ
ಒಂದುಕಡೆಯಲ್ಲಿ ಪರಿಪರಿ ಆಟಗಳ
ಚಂದದಿ ತೋರುತಿಪ್ಪ ಒಂದೆರಡನೆಸಲ್ಲ
ಕಂದರ್ಪಜನಕ ಗೋಪಾಲ ವಿಠ್ಠಲ ತನ್ನ
ಪೊಂದಿದ್ದವರ ಮನಕೆ ಒಂದನಂತನಾಗಿ ತೋರ್ಪ ೩

ಝಂಪೆತಾಳ

ಒಂದುಕಡೆಯಲ್ಲಿ ದ್ರೋಣಭೀಷ್ಮಾದಿಗಳನೆಲ್ಲ
ಕೊಂದು ಕೊಂದರ್ಜುನನ ಕೊಲ್ಲು ನೀನೆನುತಿರ್ಪ
ಒಂದುಕಡೆಯಲ್ಲಿ ಸೈನ್ಯಕ್ಕೆ ಬಲವಾಗಿ
ಮುಂದರಿದು ಮತ್ತವಾದ ಮೋಹಗೊಳಿಸುತಿಪ್ಪ
ಒಂದುರೂಪದಿ ಪಾರ್ಥಗೆ ತತ್ವತಿಳಿಸುತ
ಬಂದ ಅರಿಗಳಸ್ತ್ರಗಳ ತಾನೇ ವರೆಸುತಲಿಪ್ಪ
ಒಂದುರೂಪದಲ್ಲಿ ಅರ್ಜುನನ ಆಲಂಗಿಸಿ
ಬಂದ ಆಯಾಸಗಳ ಬಡಿಸದೆ ನಿಂದಿಪ್ಪ
ಒಂದುರೂಪದಿ ದೇವದತ್ತ ಶಂಖವನೂದಿ
ತಂದೀವಬಲವ ಪ್ರತಿಕ್ಷಣಕೆ ಪಾರ್ಥನಿಗಿನ್ನು
ಮಂದ ಅಸುರರಿಗೆ ಇದೇ ಶಬ್ದದಿಂದಲಿ ಅವರ
ಕುಂದುಮಾಡುವ ಬಲವ ಒಂದು ರೂಪದಲಿನ್ನು
ಒಂದೊಂದನಂತಾನಂತ ರೂಪನಾಗಿ
ಮುಂದರಿದ ಕುರುಸೈನ್ಯವ ಕೊಂದು ಕೊಂದ್ವಾಕುತಿಹ
ಮಂದಾಕಿನೀಜನಕ ಗೋಪಾಲ ವಿಠಲ ಹೀ
ಗೆಂದು ತಿಳಿದ ಜೀವರ್ಗೆ ಬಂಧನವನೆ ಕಳೆವ ೪

ತ್ರಿಪುಟತಾಳ

ಮತ್ಸ್ಯಾದಿ ಕೇಶವಾದಿ ಅನಿರುದ್ಧಾದಿ ಅಜಾದಿ
ವಿಶ್ವಾದಿ ಹಯಾದಿ ಶಿಂಶುಮಾರ ಕಪಿಲ ವ್ಯಾಸ
ಸ್ವಚ್ಛವಾದಾನಂತ ರೂಪಗಳೆಲ್ಲವು
ನಿಚ್ಚಕೃಷ್ಣನಲ್ಲೆ ನಿತ್ಯವಾಗಿ
ಎಚ್ಚತ್ತಿಪ್ಪವು ಕಾಣೊ ಲೇಶ ಸಂಶಯವಿಲ್ಲ
ಅಚ್ಚನಿಟ್ಟಂತೆ ಮತ್ತೊಂದೆ ಪಾದದಲ್ಲಿನ್ನು
ಅಚ್ಯುತನರೂಪ ಒಂದು ದುರ್ಬಲ ಪ್ರಬಲ ನೀ
ಚೋಚ್ಚವಿಲ್ಲವು ನಿತ್ಯವ್ಯಕ್ತ

ಅಚ್ಚುಬೆಲ್ಲವ ಒಂದು ಆವಕಡೆ ತಿಂದರೂ
ಹುಚ್ಚ ! ಒಂದುಕಡೆ ಹುಳಿ ಸಿಹಿ ಎನಿಪುದೆ ?
ಮುಚ್ಚರ ಜನರಿಗೆ ಮರುಳುಗೊಳಿಸಿ ಹೀಗೆ
ಸಿಚ್ಚವಾದ ನಿರಯು ಪೊಂದಿಸುವ
ಸ್ವಚ್ಛಮೂರುತಿ ನಮ್ಮ ಗೋಪಾಲ ವಿಠ್ಠಲ
ಅಚ್ಚಕರುಣಿ ಕಾಣೋ ಆರ್ತಜನಕೆ ನಿತ್ಯ ೫

ಅಟತಾಳ

ಅಣು ಪರಮುಅಣು ಅತ್ಯಣು ಬಲು ಅಣು
ಘನ ಘನಘನರೂಪ ಘನತರ ಘನತಮ
ಅಣುರೂಪದ ದ್ರವ್ಯಮನಸಿಗೆ ಒಂದನು
ಎಣಿಕೆಹಿಡಿದೆನೆನಲು ಮನಕೆ ನಿಲ್ಲುವುದಿಲ್ಲ
ಘನರೂಪದ ದ್ರವ್ಯ ಆಕಾರದೊಳಗಿನ್ನು
ಅಣುವಾಗಿ ತೋರುವುದು ಅವ್ಯಾಕೃತ ದ್ರವ್ಯ
ಘನವ್ಯಾಪ್ತಿವುಳ್ಳದ್ದಾದರೂ ಸರಿಯೇವೆ
ಘನಹರಿದ್ರವ್ಯದಲ್ಲಿ ಅಣುವಾಗಿ ತೋರೋದು
ಚಿನುಮಯ ಹರಿತಾನು ಚಿದ್ರೂಪಕೆ ಬಿಂಬ
ಎನಿಸಲ್ಲ ಮನುಜ ಘನಸೋಜಿಗವುಂಟು
ಅನುವಾದ ಪಂಚ ಮಹಾ ಭೂತ ಅವ್ಯಕ್ತಕೆ
ಮನಸಿಜನಯ್ಯ ತಾ ಬಿಂಬನಾಗಿಪ್ಪನು
ಎಣಿಸಿ ಎಣಿಸುವರಿಗೆ ಎಲ್ಲಕ್ಕೆ ಹರಿಬಿಂಬ
ಘನಜನಕೆ ತಾನಯ್ಯ ಗಣನೆಮಾಡನು ಅನ್ಯ
ಸನಕಾದಿಗಳೊಡೆಯ ಗೋಪಾಲ ವಿಠ್ಠಲ
ಅನಿಮಿಷರಿಗೆ ತಿಳಿಯ ಅಗೋಚರನಯ್ಯ ೬

ಆದಿತಾಳ

ಚತುರ ವಿಂಶತಿ ತತ್ವ ಸ್ವರೂಪ ಭೂತವು
ಪತಿತಪಾವನನಾದ ಹರಿಯಲ್ಲಿ ಇಪ್ಪುದು

ತತು ತತುರೂಪ ತದ್ವರ್ಣ ತದಾಕಾರ
ಗತಿಗೆ ನಿಯಾಮಕ ಸತತ ಬಿಂಬನಾಗಿ
ಖತಿಗೊಳಗಾಗದೆ ಖಂಡಾಖಂಡನಾಗಿ
ಜಿತವಾದ ತನ್ನ ಸ್ವರೂಪದಿಂದಲೀವೆ
ಇತರಾಪೇಕ್ಷೆಯು ಇಲ್ಲ ಇವರಿಂದಲ್ಲಿ ಬಂದ
ಅತಿಶಯಬೇಕಿಲ್ಲ ಆಶ್ರಿತ ಜನಪಾಲ
ಜಿತವಾದ ಜಡಕೆ ಬಿಂಬನಾದ ಬಳಿಕಿನ್ನು
ತತುವ ಜೀವರಿಗೆ ಬಿಂಬನಾಗೊದಾಶ್ಚರ್ಯವೆ
ಇತರ ಜೀವರಿಗೆಲ್ಲ ನಿಶ್ಚಯ ನಿತ್ಯದಿ
ಗತಿಬೇಕಾದವನಿಗೆ ಇದೆ ಚಿಂತನೆ ಉಪಾಯ
ಇತರ ದೇವರ ಗಂಡ ಗೋಪಾಲ ವಿಠ್ಠಲ
ಚ್ಯುತಿದೂರ ನಿತ್ಯ ಆಶ್ರಿತಜನ ಪಾಲ ೭

ಜೊತೆ

ವಿಶ್ವರೂಪ ದರುಶನಾಧಿಕಾರಿಗಳಿಂದು
ವಿಶ್ವನಾಮಕ ಗೋಪಾಲ ವಿಠಲನ ಭಜಿಸಿ

೯೩ ರಾಗ ಧನ್ಯಾಸಿ ಅಟತಾಳ

ಗುರುರಾಘವೇಂದ್ರರ ಚರಣಕಮಲವನ್ನು
ಸ್ಮರಿಸುವ ಮನುಜರಿಗೆ ಪ.
ಕರೆಕರೆಗೊಳಿಸುವ ದುರಿತ ದುಷ್ಕೃತವೆಲ್ಲ
ಕರಿಯು ಸಿಂಹನ ಕಂಡ ತೆರನಾಗುವುದಯ್ಯ ಅ.
ಗುರು ಮಧ್ವಮತವೆಂಬ ವರಕ್ಷೀರಾಂಬುಧಿಯಲ್ಲಿ
ಹರಧರಿಸಿದ ಶಶಿಯಂತುದಿಸಿ
ಪರಮತ ತಿಮಿರಕ್ಕೆ ತರಣಿಕಿರಣವೆನಿಸಿ
ಪಿರಿದು ಮೆರೆದ *ಸೀತಾ ರಾಮಾರ್ಚಕರಾದ ೧

*ನರಹರಿ ರಾಮಾರ್ಚಕರಾದ ಪಾ.

ಹರಿಯೆ ಸರ್ವೋತ್ತಮ ಸಿರಿಯು ಆತನರಾಣಿ
ಪರಮೇಷ್ಟಿ ಮರುತರೆ ಗುರುಗಳೆಂದು
ಗರುಡಶೇಷ ರುದ್ರ ಸಮರೆಂದು ಸ್ಥಾಪಿಸಿ
ಸ್ಥಿರತರತಮ ಪಂಚಭೇದ ಸತ್ಯವೆಂಬ ೨

ರಾ ಯೆನ್ನೆ ರಾಶಿ ದೋಷಗಳೆಲ್ಲ ದಹಿಸುವ
ಘು ಯೆನ್ನೆ ಘನ ಜ್ಞಾನ ಭಕ್ತಿಯೀವ
ವೇಂ ಎನ್ನೆ ವೇಗದಿ ಜನನ ಮರಣ ದೂರ
ದ್ರ ಯೆನ್ನೆ ದ್ರವಿಣಾರ್ಥ ಶ್ರುತಿಪಾದ್ಯನ ಕಾಂಬ ೩

ಅಂಧಕರಿಗೆ ಚಕ್ಷು ವಂಧ್ಯೆಯರಿಗೆ ಸುತರು
ಬಂದ ಬಂದವರಿಗಭೀಷ್ಟವ ಕೊಡುತ
ಒಂದಾರುನೂರು ವತ್ಸರ ಬೃಂದಾವನದಲ್ಲಿ
ಚಂದಾಗಿನಿಂದು ಮೆರೆವ ಕೃಪಾಸಿಂಧು ೪

ದೇವಾಂಶರಾಗಿ ತುಂಗಾತೀರದಿ ನಿಂದು
ಸೇವೆ ಭೂಸುರರಿಂದ ಬಹುಕೊಳ್ಳುತ
ಭಾವಜನಯ್ಯ ಗೋಪಾಲ ವಿಠ್ಠಲನ್ನ
ಸೇವಿಸುತಿಹ ಯತಿಕುಲ ಶಿಖಾಮಣಿಯಾದ ೫

೯೪ ರಾಗ ಪೂರ್ವಿ ಝಂಪೆತಾಳ

ಕಲಿಕಾಲ ಕಾಯೆಲವೊ ಕಮಲನಾಭ ಪ.
ಕಳವಳಿಸಿದೆನೊ ಬಲು ಕಲುಷ ಸಂಹಾರಿ ಅ.

ಧರ್ಮವೆಂಬುದು ಬಾಯಬಿಡುತಿಹುದು ನೋಡು
ಅ-ಧರ್ಮವೆಂಬುವುದು ನಲಿದಾಡುತಲಿದೆ
ಪೇರ್ಮೆಯಲಿ ಎನ್ನ ಮನದಲ್ಲಿ ನೀ ನಿಂತು
ದು-ಷ್ಕರ್ಮ ಮಾರ್ಗಕ್ಕೆನ್ನ ತಪ್ಪಿ ಹೋಗದಂತೆ ೧

ಸಾವಿರಕೆ ಸಜ್ಜನ ಶಿರೋಮಣಿಗಳಲಿ ನಿಂತು
ಸಾವಧಾನದಲಿ ಸಾಧನಮಾಡಿಸೊ
ಕೋವಿದರ ಪ್ರಿಯ ಕೋಟಲೆಯೊ ಎನಗಿದು ಜೀಯ
ಕಾವುದೆಂತೆಂದು ಕಾಲಿಗೆ ಬಿದ್ದೆನಯ್ಯ ೨

ಬಾಲಿಶನ ಮಾತನ್ನು ಲಾಲಿಸಿ ಈ ಕಲಿ
ಕಾಲದಲಿ ನಿನ್ನವರ ಕಡೆ ಹಾಯಿಸಯ್ಯ
ಶ್ರೀಲೋಲವರದ ಗೋಪಾಲ ವಿಠ್ಠಲ ಬಹು
ಕಾಲದಿಂದಲಿ ನಿನ್ನ ಆಳುಗಳಿಗಾಳೊ ೩

## ೯೫ ಸರ್ವವ್ಯಾಪ್ತಿ ಸುಳಾದಿ

### ಧ್ರುವತಾಳ

ಎಲ್ಲ ನೋಡಲು ನೀನು ಇಲ್ಲದ ಸ್ಥಳವಿಲ್ಲ
ಎಲ್ಲರಂತರ್ಯಾಮಿ ಎಲ್ಲಿಯೂ ನೀನೆ
ಹುಲ್ಲು ಕಾಷ್ಟ ಜಡ ಚೇತನಗಳಲ್ಲಿ ನೀ
ನಿಲ್ಲದಿಲ್ಲವೆಂದು ಎಲ್ಲ ಸ್ತುತಿಸುತಿದೆ
ಸಲ್ಲದ ಮನುಜನು ನಿನಗೆ ತನಗೆ ಭೇದ
ವಿಲ್ಲವೆಂಬುವನಿಗೆ ಏನೆಂಬೆ ಹರಿಯೇ
ಜಲ್ಲಜನೀರೊಳಗಿದ್ದು ಲೇಪವಿಲ್ಲದಂತೆ
ಎಲ್ಲ ಪ್ರೇರಕನು ಎಲ್ಲರಲ್ಲಿಯು ನೀನೆ
ಚಿಲ್ಲರೆ ದೈವರ ಗಂಡ ಗೋಪಾಲ ವಿಠ್ಠಲ ನಿನ್ನ
ಬಲ್ಲವರೆ ಬಲ್ಲರು ಎಲ್ಲವರರಿಯರು ೧

### ಮಠ್ಯತಾಳ

ವಿಶ್ವತೋಮುಖ ನೀನೆ ವಿಶ್ವತಶ್ಚಕ್ಷುನೀನೆ
ವಿಶ್ವತೋ ಬಾಹು ನೀನೆ ವಿಶ್ವತೋ ಹಸ್ತನೀನೆ
ವಿಶ್ವತಶ್ಶ್ರವಣ ನೀನೆ ವಿಶ್ವಧಾರಕ ನೀನೆ

ವಿಶ್ವ ವ್ಯಾಪಕ ಸರ್ವ ವಿಶ್ವಮಯನು ನೀನೆ
ವಿಶ್ವನಾಮಕ ಹರಿ ಗೋಪಾಲ ವಿಠ್ಠಲ
ವಿಶ್ವಾಸ ಕೊಡು ನಿನ್ನ ವಿಶ್ವ ಚರಣದಲ್ಲಿ ೨

ತ್ರಿಪುಟತಾಳ

ಅಂಗುಷ್ಠಾಗ್ರ ಮಾತ್ರ ಪರಿಮಾಣ ಮೂರುತಿ ನೀನೆ
ರಂಗ ಆತ್ಮ ಅಂತರಾತ್ಮ ಮೂರುತಿ ನೀನೆ
ಲಿಂಗದೇಹ ಭಂಗವಾಗುವುದಕೆ ಸಾಧು
ಸಂಗದಲ್ಲಿ ಇಡುವ ಉತ್ತುಂಗ ಮಹಿಮ ನೀನೆ
ಗಂಗಾತೀರ್ಥದಲ್ಲಿದ್ದು ಸುಜನರ ದೋ
ಷಂಗಳ ಕಳೆವುದಕೆ ಮಂಗಳಾತ್ಮಮೂರುತಿ ನೀನೆ
ಸ್ವಾಂಗಾಯನಾಮ ನಮ್ಮ ಗೋಪಾಲವಿಠ್ಠಲ
ಸಂಗದಲ್ಲಿರಿಸೋ ನಿನ್ನ ಡಿಂಗರಿಗರೊಡನೆ ೩

ಅಟತಾಳ

ಸಿರಿಯಲ್ಲಿಯು ನೀನೆ ಪರಮೇಷ್ಟಿಯಲ್ಲಿಯು ನೀನೆ
ಮರುತವಾಣಿ ಭಾರತಿ ಎಲ್ಲರಲ್ಲಿಯು ನೀನೆ
ಉರಗನಲ್ಲಿಯು ನೀನೆ ಗರುಡನಲ್ಲಿಯು ನೀನೆ
ಗಿರಿಜಾಪತಿಯಲ್ಲಿಯೂ ಸುರಪತಿಯಲ್ಲಿಯು ನೀನೆ
ವರ ಸಿದ್ಧ ಸಾಧ್ಯ ಕಿನ್ನರರಲ್ಲಿಯು ನೀನೆ
ಗಿರಿ ಗುಹೆಗಳಲ್ಲಿ ಒಳಗೆ ಹೊರಗೆ ಎಲ್ಲ
ಕರೆದರೆ ಓ ಎಂಬ ಪ್ರತಿಶಬ್ದವು ನೀನೆ
ಪರಶುರಾಮನಾಗಿ ಪಾವಕನಲಿ ನೀನೆ
ಬಹಿರಂತರ್ದಶ ದಿಕ್ಕುಗಳಲಿ ನೀನೆ ನೋಡಲು
ಕರಿಸಿಹ್ಮಶಾರ್ದೂಲ ಮೊದಲಾದ
ಸೆರುವ ಜೀವರಲ್ಲಿ ಪರಿಪೂರ್ಣ ನೀನೆ
ಮರಮೃಗ ಮೊದಲಾದ ಅಖಿಳರಲ್ಲಿಯು ನೀನೆ
ಕರ್ಮಾನುಸಾರವಾದ ದುಷ್ಕರಂತಕ ನೀನೆ

ಧುರವಿಕ್ರಮ ನಮ್ಮ ಗೋಪಾಲವಿಠ್ಠಲ
ದೂರದೂರ ಅತಿದೂರ ತರನು ನೀನೆ
ಅಂತಿಕಾಂತಿಕ ನೀನೆ ೪

ಆದಿತಾಳ

ನಿಗಮವ ತಂದಂಥ ನಗಧರನು ನೀನೆ
ಜಗವನು ತಂದಂಥ ಅಸುರಾಂತಕ ನೀನೆ
ಮಿಗೆ ಕಂಭದಿ ಬಂದ ನರಸಿಂಹನು ನೀನೆ
ಜಗವ ನೀರಡಿಯಾಗಿ ಅಳೆದ ವಾಮನ ನೀನೆ
ಮಗನಾಗಿ ಮಾತೆಯ ಘಾ-ತಿಸಿದ ಭಾರ್ಗವ ನೀನೆ
ಜಗವರಿಯೆ ರಾವಣಾಂತಕನು ನೀನೆ
ನಗುತ ಪೂತನಿಯುಸುವ ಹೀರಿ ಶಕಟನ ಒದ್ದು
ಹಗೆ ಕಂಸನ ಕೊಂದ ಶ್ರೀಕೃಷ್ಣನು ನೀನೆ
ಮೃಗಧರ ಧರಗೊಲಿದು ಬತ್ತಲೆ ನಿಂದು ತ್ರಿಪುರವ
ಒಗೆದು ಮೆರೆವ ಬೌದ್ಧಾವತಾರನು ನೀನೆ
ಸೊಗಸಾಗಿ ಹಯವೇರಿ ಕಲ್ಕಿಯು ನೀನಾದೆ
ಮಿಗೆ ಅನಂತಾವತಾರನು ನೀನಾದೆ
ಜಗಜ್ಜನ್ಮಾದಿಕಾರಣ ಗೋಪಾಲವಿಠ್ಠಲ
ನಿಗಮಗೋಚರ ಅಘಶೂನ್ಯ ಪಾವನನೆ ೫

ಜೊತೆ

*...................................................

...................................................

* ದೊರೆಯಲಿಲ್ಲ



ಶ್ರೀರಾಮಸಹಾಯಂ.

# ಶ್ರೀ ಕರ್ನಾಟಕ ಹರಿದಾಸ ಕೀರ್ತನ ತರಂಗಿಣಿ

## ಶ್ರೀ ಪಾಂಡುರಂಗ ವಿಠಲಾಯನಮಃ

## ಶ್ರೀ ಮೋಹನದಾಸರಾಯರ 'ಕೋಲುಹಾಡು'

ರಾಗ ನಾದನಾಮಕ್ರಿಯ ಆದಿತಾಳ

ಆಕಾಶಕಭಿಮಾನಿ ಶ್ರೀಕಂಠವರಪುತ್ರ
ಏಕದಂತನೆ ವಿಘ್ನೇಶ ಕೋಲೆ
ಏಕದಂತನೆ ವಿಘ್ನೇಶ ನಿನ್ನಪದ
ಏಕಚಿತ್ತದಲಿ ಬಲಗೊಂಬೆ ಕೋಲೆ ೧

ನೆನೆಯಕ್ಕಿ ನೆನೆಗಡಲೆ ಗೊನೆಯ ಬಾಳೆಯಹಣ್ಣು
ಘನವಾದ ಚಿಗುಳಿ ತಂಬಿಟ್ಟು ಕೋಲೆ
ಘನವಾದ ಚಿಗುಳಿ ತಂಬಿಟ್ಟು ತಂದೀವೆ
ಗಣಪತಿ ಮತಿಯ ಕರುಣಿಸು ಕೋಲೆ ೨

ಜಗದುತ್ಪತ್ತಿ ಸ್ಥಿತಿ ಲಯಕೆ ಕಾರಣನಾದ
ಜಗದೀಶ ಜಾಹ್ನವಿ ಜನಕನೆ ಕೋಲೆ
ಜಗದೀಶ ಜಾಹ್ನವಿ ಜನಕನಾರಾಯಣ
ನಗಧರನ ಮುನ್ನ ಬಲಗೊಂಬೆ ಕೋಲೆ ೩

ಮಚ್ಛ ಕೂರುಮ ವರಹ ನರಸಿಂಹ ವಾಮನ
ಸ್ವಚ್ಛ ಭೃಗುರಾಮ ರಘುರಾಮ ಕೋಲೆ
ಸ್ವಚ್ಛ ಭೃಗುರಾಮ ರಘುರಾಮ ಕೃಷ್ಣ ಬೌದ್ಧ
ಅಚ್ಛಕಲ್ಕಿಯ ಬಲಗೊಂಬೆ ಕೋಲೆ ೪

ಈಶ ಬ್ರಹ್ಮರಿಗೆ ನಿಯಾಮಕನಾಗಿದ್ದು
ಪೋಷಿಸುತಿಪ್ಪ ಪರಮಾತ್ಮ ಕೋಲೆ
ಪೋಷಿಸುತಿಪ್ಪ ಪರಮಾತ್ಮನಾದ ಶ್ರೀ
ಕೇಶವನ ಮೊದಲೆ ಬಲಗೊಂಬೆ ಕೋಲೆ ೫

ನೀರಿಗಾಶ್ರಯನಾಗಿ ನೀರೊಳು ಮಲಗಿಪ್ಪ
ನೀರಜನೇತ್ರ ನಿಗಮಾತ್ಮ ಕೋಲೆ
ನೀರಜನೇತ್ರ ನಿಗಮಾತ್ಮನಾದ ಶ್ರೀ
ನಾರಾಯಣನ್ನ ಬಲಗೊಂಬೆ ಕೋಲೆ ೬

ಯಾದವ ಕುಲಜನೆ ಸಾಧುಗಳರಸನೆ
ಮಾದೇವಿಗಾಶ್ರಯನಾಗಿಪ್ಪ ಕೋಲೆ
ಮಾದೇವಿಗಾಶ್ರಯನಾಗಿ ಪಾಲಿಸುವ
ಮಾಧವನ್ನ ಮೊದಲೆ ಬಲಗೊಂಬೆ ಕೋಲೆ ೭

ಚಂದದಿಂದ ವೇದ ವೃಂದ ಪ್ರತಿಪಾದ್ಯನೆ
ಇಂದಿರಾದೇವಿ ರಮಣನೆ ಕೋಲೆ
ಇಂದಿರಾದೇವಿ ರಮಣನಾದ ಗೋ
ವಿಂದನ್ನ ಮೊದಲೆ ಬಲಗೊಂಬೆ ಕೋಲೆ ೮

ಸೃಷ್ಟಿಯೊಳಗೆಲ್ಲ ವ್ಯಾಪ್ತನಾಗಿರುತಿಪ್ಪ
ವೈಷ್ಣವ ಕುಲಕೆ ತಿಲಕನೆ ಕೋಲೆ
ವೈಷ್ಣವ ಕುಲಕೆ ತಿಲಕನಾದ ಶ್ರೀ
ವಿಷ್ಣುವಿನ ಮೊದಲೆ ಬಲಗೊಂಬೆ ಕೋಲೆ ೯

ಅಧಮನಾಗಿದ್ದಂಥ ಅಸುರನ ಸಂಹರಿಸಿ
ಮುದವ ಬೀರಿದನೆ ಸುರರಿಗೆ ಕೋಲೆ
ಮುದವ ಬೀರುತ ಸುರರ ಪಾಲಿಸುವಂಥ
ಮಧುಸೂದನನ್ನ ಬಲಗೊಂಬೆ ಕೋಲೆ ೧೦

ಚಿಕ್ಕ ಬ್ರಾಹ್ಮಣನಾಗಿ ಬಲಿಯದಾನವ ಬೇಡಿ
ಆಕ್ರಮಿಸಿದನೆ ತ್ರಿಲೋಕವ ಕೋಲೆ
ಆಕ್ರಮಿಸಿ ತ್ರಿಲೋಕವನಳೆದ ತ್ರಿ
ವಿಕ್ರಮನ್ನ ಮೊದಲೆ ಬಲಗೊಂಬೆ ಕೋಲೆ ೧೧

ಭೂಮಿಯೊಳಗೆ ಅತಿ ಸಂಭ್ರಮನಾಗಿದ್ದು
ಕಾಮಿತಾರ್ಥಂಗಳ ಕರೆವನೆ ಕೋಲೆ
ಕಾಮಿತಾರ್ಥಂಗಳ ಕರೆದು ಭಕ್ತರ ಪೊರವ
ವಾಮನನ್ನ ಮೊದಲೆ ಬಲಗೊಂಬೆ ಕೋಲೆ ೧೨

ವೇದಾಭಿಮಾನಿಗೆ ಸಾದರವಾಗಿಪ್ಪ
ಬೌದ್ಧ ಮೂರುತಿಯೆ ಭವದೂರ ಕೋಲೆ
ಬೌದ್ಧ ಮೂರುತಿಯೆ ಭವದೂರನಾದ ಶ್ರೀ
ಶ್ರೀಧರನ್ನ ಮೊದಲೆ ಬಲಗೊಂಬೆ ಕೋಲೆ ೧೩

ಸಾಕಾರಮೂರುತಿ ಸರ್ವೇಂದ್ರಿಯನಿಯಾಮಕ
ನಾಕೇಶವಂದ್ಯ ನಳಿನಾಕ್ಷಕೋಲೆ
ನಾಕೇಶವಂದ್ಯ ನಳಿನಾಕ್ಷನಾದ ಹೃ
ಷೀಕೇಶ ಹರಿಯ ಬಲಗೊಂಬೆ ಕೋಲೆ ೧೪

ಪದುಮಸಂಭವಪಿತ ಪದುಮಿನಿ ವಲ್ಲಭ
ಪದುಮ ಪೊಕ್ಕುಳಲಿ ಪಡೆದನೆ ಕೋಲೆ
ಪದುಮ ಪೊಕ್ಕುಳಲ್ಲಿ ಪಡೆದು ಪಾಲಿಸುವಂಥ
ಪದುಮನಾಭನ ಮುನ್ನೆ ಬಲಗೊಂಬೆ ಕೋಲೆ ೧೫

ಕಾಮಿನಿ ಯಶೋದೆ ಒರಳಿಗೆ ಕಟ್ಟಲು
ಶ್ರೀಮನೋಹರ ಶಳೆದೊಯ್ದ ಕೋಲೆ
ಶ್ರೀಮನೋಹರ ಶಳೆದು ಪಾಪವಕಳೆದ
ದಾಮೋದರನ್ನ ಬಲಗೊಂಬೆ ಕೋಲೆ ೧೬

ಕಿಂಕರರಚಿತ್ತ ದುರ್ವಿಷಯಕ್ಕೆರಗಲು
ಪಂಕಜನಾಭ ಶಳೆದನೆ ಕೋಲೆ
ಪಂಕಜನಾಭ ಶಳೆದು ತನ್ನಲ್ಲಿಡುವ
ಸಂಕರುಷಣನ್ನ ಬಲಗೊಂಬೆ ಕೋಲೆ ೧೭

ಏಸುಬ್ರಹ್ಮಾಂಡದೊಳು ವಾಸವಾಗಿರುತಿಪ್ಪ
ದಾಸವರ್ಗವನೆ ಪೊರೆವನೆ ಕೋಲೆ
ದಾಸವರ್ಗವನೆ ಪೊರೆವನೆ ನಮ್ಮ ಶ್ರೀ
ವಾಸುದೇವನ್ನ ಬಲಗೊಂಬೆ ಕೋಲೆ ೧೮

ಮುದ್ದುಮೊಗದ ದೈವ ಅದ್ವೈತಮಹಿಮನೆ
ಸದ್ವೈಷ್ಣವರ ಪೊರೆವನೆ ಕೋಲೆ
ಸದ್ವೈಷ್ಣವರ ಪೊರೆವನೆ ಅಜನಯ್ಯ
ಪ್ರದ್ಯುಮ್ನ ಹರಿಯ ಬಲಗೊಂಬೆ ಕೋಲೆ ೧೯

ಅನಿಮಿಷ ದೈತ್ಯರ ಮನಕೆ ಸಿಲುಕದಿಪ್ಪ
ಸನಕಾದಿವಂದ್ಯ ಸಕಲೇಶ ಕೋಲೆ
ಸನಕಾದಿವಂದ್ಯ ಸಕಲೇಶನಾಗಿಪ್ಪ
ಅನಿರುದ್ಧ ಹರಿಯ ಬಲಗೊಂಬೆ ಕೋಲೆ ೨೦

ಕ್ಷರಾಕ್ಷರದೊಳು ಪರಮೋತ್ತಮನಾದ
ಕರಿರಾಜವರದ ಕವಿಗೇಯ ಕೋಲೆ
ಕರಿರಾಜವರದ ಕವಿಗೇಯನಾದ ಶ್ರೀ
ಪುರುಷೋತ್ತಮನ್ನ ಬಲಗೊಂಬೆ ಕೋಲೆ ೨೧

ಅಕ್ಷಯಮೂರುತಿ ಮೋಕ್ಷದಾಯಕ ಸ್ವಾಮಿ
ಕುಕ್ಷಿಯೊಳ್ ಜಗವ ರಕ್ಷಿಪ ಕೋಲೆ
ಕುಕ್ಷಿಯೊಳ್ ಜಗವ ಪಾಲಿಪ ನಮ್ಮ ಶ್ರೀ
ಧೋಕ್ಷಜ ಹರಿಯ ಬಲಗೊಂಬೆ ಕೋಲೆ ೨೨

ಕ್ರೂರ ಖಳನುದರ ಸೀಳಿ ಪ್ರಹ್ಲಾದನ
ಕಾರುಣ್ಯದಿಂದ ಕಾಯ್ದನೆ ಕೋಲೆ
ಕಾರುಣ್ಯದಿಂದ ಕಾಯ್ದನೆ ನಮ್ಮ ಶ್ರೀ
ನಾರಸಿಂಹನ್ನ ಬಲಗೊಂಬೆ ಕೋಲೆ ೨೩

ಸಚ್ಚಿದಾನಂದನೆ ಸಕಲಗುಣ ಪರಿಪೂರ್ಣ
ಮುಚುಕುಂದ ವರದ ಮುನಿನುತ ಕೋಲೆ
ಮುಚುಕುಂದ ವರದ ಮುನಿನುತನಾದ ಶ್ರೀ
ಅಚ್ಯುತನ ಮೊದಲೆ ಬಲಗೊಂಬೆ ಕೋಲೆ ೨೪

ದುರ್ಧರ್ಷರಾಗಿದ್ದ ಖಳರ ಸಮುದಾಯವ
ಮರ್ದನಮಾಡಿದ ಮಹಮಹಿಮ ಕೋಲೆ
ಮರ್ದನ ಮಾಡಿದ ಮಹಮಹಿಮನಾದ ಜ
ನಾರ್ದನ್ನ ಮೊದಲೆ ಬಲಗೊಂಬೆ ಕೋಲೆ ೨೫

ಇಂದ್ರಾನುಜನಾಗಿ ಸ್ವರ್ಗದೊಳಿರುತಿದ್ದು
ಸಾಂದ್ರಸುಖವೀವೆ ಸುರರಿಗೆ ಕೋಲೆ
ಸಾಂದ್ರಸುಖವಿತ್ತು ಸುರರ ಪಾಲಿಸುವ ಉ
ಪೇಂದ್ರನ ಮೊದಲೆ ಬಲಗೊಂಬೆ ಕೋಲೆ ೨೬

ಪರಮಭಕ್ತರ ಪಾಪ ಪರಿಹಾರವನೆ ಮಾಡಿ
ಪರಮ ಪದವಿಯ ಪಾಲಿಪ ಕೋಲೆ
ಪರಮ ಪದವಿಯ ಪಾಲಿಪ ನಮ್ಮ ಶ್ರೀ
ಹರಿಯಮೊದಲೆ ಬಲಗೊಂಬೆ ಕೋಲೆ ೨೭

ಶಿಷ್ಟಪಾಲಕ ಉತ್ಕೃಷ್ಟ ಜ್ಞಾನಾನಂದ
ಕೃಷ್ಣೆಯ ಕಷ್ಟಬಿಡಿಸಿದ ಕೋಲೆ
ಕೃಷ್ಣೆಯ ಕಷ್ಟಬಿಡಿಸಿದ ನಮ್ಮ ಶ್ರೀ
ಕೃಷ್ಣನ್ನ ಮೊದಲೆ ಬಲಗೊಂಬೆ ಕೋಲೆ ೨೮

ಅನಿರುದ್ಧಾದಿರೂಪ ವಿಶ್ವಾದಿ ಅಜಿತಾದಿ
ಸನತ್ಕುಮಾರಾದಿ ಅಜಾದಿಕೋಲೆ
ಸನತ್ಕುಮಾರಾದಿ ಅಜಾದಿ ರೂಪನಾದ
ಘನಮಹಿಮನ್ನ ಬಲಗೊಂಬೆ ಕೋಲೆ

ಹಯಗ್ರೀವದತ್ತ ಋಷಭ ಸಂಕರ್ಷಣ
ಭಯರಹಿತ ಬಾದರಾಯಣ ಕೋಲೆ
ಭಯರಹಿತ ಬಾದರಾಯಣ ಮಹಿದಾಸ
ವೈಕುಂಠಹರಿಯ ಬಲಗೊಂಬೆ ಕೋಲೆ ೩೦

ಆತ್ಮಾದಿ ವಾಸುದೇವಾದಿ ಮೂರುತಿ
ಶ್ರೀ ತರುಣೀಶ ವಿಶ್ವೇಶ ಕೋಲೆ
ಶ್ರೀ ತರುಣೀಶ ವಿಶ್ವೇಶ ರೂಪನಾದ
ಜ್ಯೋತಿರ್ಮಯನ ಬಲಗೊಂಬೆ ಕೋಲೆ ೩೧

ಮುನಿವೇದವ್ಯಾಸ ಸನತ್ಕುಮಾರ ಮೂರ್ತಿ
ಮಿನಗುವ ದತ್ತಾತ್ರೇಯನೆ ಕೋಲೆ
ಮಿನಗುತ ದತ್ತಾತ್ರೇಯ ಹಯಗ್ರೀವ
ದನುಜಾಂತಕನ್ನ ಬಲಗೊಂಬೆ ಕೋಲೆ ೩೨

ಕಂಗಳಾಪಾಂಗದಿಂ ಕಮಲಾಸನಾದಿಗಳ
ಸಂಗಾತ ಸೃಷ್ಟಿಪ ಮಹಲಕ್ಷ್ಮಿ ಕೋಲೆ
ಸಂಗಾತ ಸೃಷ್ಟಿಪ ಮಹಲಕ್ಷ್ಮಿ ನಿನ್ನಪಾ
ದಂಗಳಿಗೆರೆಗಿ ಬಲಗೊಂಬೆ ಕೋಲೆ ೩೩

ಶ್ರೀಮಾಯಾ ಜಯಾಕೃತಿ ಶಾಂತಿ ಇಂದಿರಾದೇವಿ
ಕಾಮನ ಜನನಿ ಜಯಂತಿ ಕೋಲೆ
ಕಾಮನ ಜನನಿ ಜಯಂತಿ ಜಾನಕಿ ಸತ್ಯ
ಭಾಮಾ ರುಗ್ಮಿಣಿಯ ಬಲಗೊಂಬೆ ಕೋಲೆ ೩೪

ಹದಿನಾಲ್ಕು ಲೋಕವ ಮುದದಿಂದ ಸೃಜಿಸುವ
ಪದುಮಸಂಭವನೆ ಪರಮೇಷ್ಠಿ ಕೋಲೆ
ಪದುಮಸಂಭವನೆ ಪರಮೇಷ್ಠಿ ನಿನ್ನಪದ
ಪದುಮವಮುನ್ನ ಬಲಗೊಂಬೆ ಕೋಲೆ ೩೫

ಹನುಮಭೀಮ ಮಧ್ವಮುನಿರಾಯ ಮಾರುತ
ದನುಜಾರಿ ಭಕ್ತ ವಿರಕ್ತ ಕೋಲೆ
ದನುಜಾರಿ ಭಕ್ತ ವಿರಕ್ತ ನಿನ್ನಪಾದ
ವನಜವ ಮುನ್ನ ಬಲಗೊಂಬೆ ಕೋಲೆ ೩೬

ವಾಣಿ ಅಜನ ಮುದ್ದುರಾಣಿ ಪಲ್ಲವ ಪಾಣಿ
ಜಾಣೆ ಕೊಡೆಮಗೆ ಮತಿಗಳ ಕೋಲೆ
ಜಾಣೆ ಕೊಡೆಮಗೆ ಮತಿಗಳ ನಿನ್ನಪಾದ
ರೇಣುವಿನ ಮುನ್ನ ಬಲಗೊಂಬೆ ಕೋಲೆ ೩೭

ಭಾರತಿದೇವಿ ನಿನ್ನ ವಾರಿಜ ಚರಣವ
ಬಾರಿಬಾರಿಗೆ ಭಜಿಸುವೆ ಕೋಲೆ
ಬಾರಿಬಾರಿಗೆ ಭಜಿಸುವೆ ಎಮಗೆ ಶ್ರೀ
ನಾರಾಯಣನಲ್ಲಿ ರತಿಕೊಡು ಕೋಲೆ ೩೮

ಇಂದ್ರನಗೆದ್ದು ಸುಧೆ ತಂದು ಮಾತೆಯ
ಬಂಧನ ಕಡಿದ ಬಲುಧೀರ ಕೋಲೆ
ಬಂಧನ ಕಡಿದ ಬಲುಧೀರನಾದ ಖ
ಗೇಂದ್ರನ್ನ ಮುನ್ನ ಬಲಗೊಂಬೆ ಕೋಲೆ ೩೯

ಸಾಸಿರ ಮುಖದಿಂದ ಶ್ರೀಶನ್ನ ತುತಿಸಿ ಶ್ರೀ
ವಾಸುದೇವಂಗೆ ಹಾಸಿಕೆ ಕೋಲೆ
ವಾಸುದೇವಂಗೆ ಹಾಸಿಕೆಯಾದ ಮಹಾ
ಶೇಷನ್ನ ಮುನ್ನ ಬಲಗೊಂಬೆ ಕೋಲೆ ೪೦

ಅಪರಿಮಿತಕಾರ್ಯ ತ್ರಿಪುರದಹನನೆ
ಚಪಲಮೂರುತಿ ಚಂದ್ರಚೂಡ ಕೋಲೆ
ಚಪಲಮೂರುತಿ ಚಂದ್ರಚೂಡ ಭಜಕರ
ಅಪಮೃತ್ಯುಹರನ ಬಲಗೊಂಬೆ ಕೋಲೆ ೪೧

ಜಾಂಬವತ್ಯಾದಿ ಶ್ರೀಹರಿಯ ರಾಣಿಯರಿಗೆ
ಸಂಭ್ರಮದಿಂದ ಶರಣೆಂಬೆ ಕೋಲೆ
ಸಂಭ್ರಮದಿಂದ ಶರಣೆಂಬೆ ಖಗಶೇಷ
ಶಂಭು ರಾಣಿಯರ ಬಲಗೊಂಬೆ ಕೋಲೆ ೪೨

ಶಕ್ರ ಕಾಮಾದಿ ದೇವರ್ಕಳ ಚರಣಕ್ಕೆ
ಅಕ್ಕರದಿಂದ ಅಭಿನಮಿಪೆ ಕೋಲೆ
ಅಕ್ಕರದಿಂದ ಅಭಿನಮಿಸಿ ಪೇಳ್ವೆ ದೇ
ವಕ್ಕಿನಂದನನ ಚರಿತೆಯ ಕೋಲೆ ೪೩

ಶ್ರೀಮಧ್ವಮುನಿ ಪದ್ಮನಾಭ ನರಹರಿತೀರ್ಥ
ಶ್ರೀಮಾಧವಾರ್ಯ ಅಕ್ಷೋಭ್ಯ ಕೋಲೆ
ಶ್ರೀಮಾಧವಾರ್ಯ ಅಕ್ಷೋಭ್ಯ ಜಯತೀರ್ಥ
ಸ್ವಾಮಿಗಳ ಮೊದಲೆ ಬಲಗೊಂಬೆ ಕೋಲೆ ೪೪

ನ್ಯಾಯಾಮೃತ ತರ್ಕತಾಂಡವ ಚಂದ್ರಿಕಾ
ನ್ಯಾಯಗ್ರಂಥಗಳ ರಚಿಸಿದ ಕೋಲೆ
ನ್ಯಾಯಗ್ರಂಥಗಳ ರಚಿಸಿದ ನಮ್ಮ ವ್ಯಾಸ
ರಾಯರ ಮುನ್ನ ಬಲಗೊಂಬೆ ಕೋಲೆ ೪೫

ಜನನಿ ಗರ್ಭದಿಂದವನಿಸ್ಪರ್ಶವಾಗದೆ
ಜನಿಸಿ ಬ್ರಹ್ಮಣ್ಯ ಮುನಿಗಳ ಕೋಲೆ
ಜನಿಸಿ ಬ್ರಹ್ಮಣ್ಯ ಮುನಿಗಳ ಮೃದುಹಸ್ತ
ವನಜಸಂಭವನ ಬಲಗೊಂಬೆ ಕೋಲೆ ೪೬

ಶ್ರೀಪಾದರಾಯರಲಿ ಸಕಲ ವಿದ್ಯವನೋದಿ
ಶ್ರೀಪತಿ ಪ್ರೀತಿಪಡಿಸಿದ ಕೋಲೆ
ಶ್ರೀಪತಿ ಪ್ರೀತಿಪಡಿಸಿದ ವ್ಯಾಸಮುನಿ
ಭೂಪನ ಮೊದಲೆ ಬಲಗೊಂಬೆ ಕೋಲೆ ೪೭

ದೇಶಾಧಿಪತಿಗೆಬಂದ ಕುಯೋಗವನೆ ನೂಕಿ
ತಾ ಸಿಂಹಾಸನವೇರಿ ಮೆರೆದನೆ ಕೋಲೆ
ತಾ ಸಿಂಹಾಸನವೇರಿ ಮೆರೆದನೆ ವ್ಯಾಸಮು
ನೀಶನ್ನ ಮೊದಲೆ ಬಲಗೊಂಬೆ ಕೋಲೆ ೪೮

ದಂಡ ಕಮಂಡಲುಧರ ಪಂಡಿತರಾಧಾರ
ಕುಂಡಲಿಶಯನನ ಭಜಕರ ಕೋಲೆ
ಕುಂಡಲಿಶಯನನ ಭಜಕ ರಾಘವೇಂದ್ರರ
ಕೊಂಡಾಡಿಪನನ ಗುಣಿಸುವೆ ಕೋಲೆ ೪೯

ತಂತ್ರಸಾರಗಳಿಗೆ ಅರ್ಥವನ್ನು ಸ್ವ
ತಂತ್ರದಿಂದಲಿ ರಚಿಸಿದ ಕೋಲೆ
ಸ್ವ-ತಂತ್ರದಿಂದಲಿ ರಚಿಸಿದ ರಾಘವೇಂದ್ರರ
ಪಂಥವಿದ್ದಲ್ಲಿ ಬಲಗೊಂಬೆ ಕೋಲೆ ೫೦

ವೇದಶಾಸ್ತ್ರಾಮೃತ ಸಾರಬಲ್ಲ ರಾಮ
ವೇದವ್ಯಾಸರ ಭಜಕರ ಕೋಲೆ
ರಾಮ-ವೇದವ್ಯಾಸ ಭಜಕ ರಾಘವೇಂದ್ರರ
ಪಾದವಿದ್ದಲ್ಲಿ ಬಲುಗೊಂಬೆ ಕೋಲೆ ೫೧

ತುಂಗಭದ್ರಾತೀರ ಮಂತ್ರಾಲಯದಲ್ಲಿ
ಮಂಗಳಮಹಿಮರೆನಿಪರೆ ಕೋಲೆ
ಮಂಗಳಮಹಿಮರೆನಿಪ ರಾಘವೇಂದ್ರ
ರಂಘ್ರಿಕಮಲವ ಬಲಗೊಂಬೆ ಕೋಲೆ ೫೨

ಗುರು ರಾಘವೇಂದ್ರರ ಚರಣ ಪಂಕಜವನ್ನು
ಸ್ಥಿರಬುದ್ಧಿಯಿಂದ ಸ್ಮರಿಸುವೆ ಕೋಲೆ
ಸ್ಥಿರಬುದ್ಧಿಯಿಂದ ಸ್ಮರಿಸಿ ನಾ ಪೇಳ್ವೆನು
ಸರಸಿಜಾಕ್ಷನ್ನ ಚರಿತೆಯ ಕೋಲೆ ೩೩

ರಾಜರಾಜೇಶ್ವರ ಸತ್ಯಾಭಿನವ ತೀರ್ಥ
ರಾಜಕರಾಬ್ಜ ಸಂಭೂತ ಕೋಲೆ
ರಾಜಕರಾಬ್ಜ ಸಂಭೂತ ಸತ್ಯಾಧಿ
ರಾಜರ ನೊದಲೆ ಬಲಗೊಂಬೆ ಕೋಲೆ ೩೪

ಕ್ಷೀರನದಿಯತೀರ ವೇಲೂರು ಪುರವಾಸ
ಸಾರಸಜ್ಜನರ ಪೊರೆವನೆ ಕೋಲೆ
ಸಾರಸಜ್ಜನರ ಪೊರೆವ ಸತ್ಯಾಧಿರಾಜ
ಧೀರಯತಿಗಳ ಬಲಗೊಂಬೆ ಕೋಲೆ ೩೫

ಸತ್ಯಬೋಧರೆಂಬ ಸದ್ಗುರು ಚರಣವ
ಚಿತ್ತದೊಳಿಟ್ಟು ಚರಿಸುವೆ ಕೋಲೆ
ಚಿತ್ತದೊಳಿಟ್ಟು ಸ್ಮರಿಸಿ ನಾ ಪೇಳ್ವೆನು
ಚಿತ್ತದೊಲ್ಲಭನ ಚರಿತೆಯ ಕೋಲೆ ೩೬

ಪರಮಗುರುಗಳಾದ ಪುರಂದರರಾಯರ
ಪರಮಕೃಪಾಪಾತ್ರ ವಿಜಯರಾಯ ಕೋಲೆ
ಪರಮಕೃಪಾಪಾತ್ರ ವಿಜಯರಾಯರ ಪಾದ
ಪರಮಭಕ್ತಿಯಲಿ ಸ್ಮರಿಸುವೆ ಕೋಲೆ ೩೭

ದೇವನಾರಾಯಣ ಭೂದೇವಿ ಮೊರೆಕೇಳಿ
ದೇವಕಿಯಲ್ಲಿ ಜನಿಸಿದ ಕೋಲೆ
ದೇವಕಿಯಲ್ಲಿ ಜನಿಸಿ ಧಾರುಣಿ
ದೇವಿ ಭಾರವನ್ನೆಲ್ಲನಿಳುಹಿದ ಕೋಲೆ ೩೮

ಶಕಟಪೂತನಿವತ್ಸ ಬಕಧೇನುಕ ಕಂಸ
ಮುಖಾದ್ಯರನ್ನು ಮಡುಹಿದ ಕೋಲೆ
ಮುಖಾದ್ಯರನ್ನು ಮಡುಹಿ ವಾಸುದೇವ ದೇ
ವಕಿಯರ ಬಂಧನ ಬಿಡಿಸಿದ ಕೋಲೆ ೫೯

ಹೆತ್ತತಾಯಿಯು ಮೊಲೆಯರ್ಥಿಲಿ ನಲಿದುಂಡು
ಮತ್ತೆ ಬಾಲಲೀಲೆ ತೋರಿದ ಕೋಲೆ
ಮತ್ತೆ ಬಾಲಲೀಲೆ ತೋರಿ ತೋಷವಪಡಿಸಿ
ಮುತ್ಯಾಗೆ ಪಟ್ಟವ ಕಟ್ಟಿದ ಕೋಲೆ ೬೦

ಜರೆಯ ಸುತನು ತಾನು ಜಗಳಕ್ಕೆ ಬಹನೆಂದು
ಕರೆಸಿದ ವಿಶ್ವಕರ್ಮನ್ನ ಕೋಲೆ
ಕರೆಸಿದ ವಿಶ್ವಕರ್ಮನ್ನ ದ್ವಾರಕಾ
ಪುರವ ನಿರ್ಮಿಸೆಂದಾಕ್ಷಣದಲಿ ಕೋಲೆ ೬೧

ದ್ವಾರಕಾಪುರದ ಶೃಂಗಾರ ವರ್ಣಿಸಲು
ಮೂರುಕಣ್ಣವಗೆ ವಶವಲ್ಲ ಕೋಲೆ
ಮೂರುಕಣ್ಣವಗೆ ವಶವಲ್ಲ ನಾಲ್ಕಾರು
ಮೋರೆಯವರಿಗೆ ವಶವಲ್ಲ ಕೋಲೆ ೬೨

ದ್ವಾರದ್ವಾರಗಳಿಗೆ ತಳಿರುತೋರಣಗಳು
ಮೇರುವಿಗೆ ಪೊನ್ನ ಕಲಶವು ಕೋಲೆ
ಮೇರುವಿಗೆ ಕಲಶ ಕನ್ನಡಿ ಮನೋ
ಹಾರವಾಗಿರುವುದು ಸಟೆಯಲ್ಲ ಕೋಲೆ ೬೩

ಹದಿನಾರುಸಾವಿರ ಚದುರೇರ ಮಂದಿರವು
ಮದನನಯ್ಯನ ಮನೆ ಮಧ್ಯೆ ಕೋಲೆ
ಮದನನಯ್ಯನ ಮನೆ ಮಧ್ಯಪ್ರದೇಶ
ಅದುಭುತವಾಗಿ ಬೆಳಗೋದು ಕೋಲೆ ೬೪

ಒಬ್ಬನೆ ವಿಷ್ಣು ವಿನ್ನೊಬ್ಬ ದೈವಗಳಿಲ್ಲೆಂ
ದಬ್ಬರದಿಂದ ನಾಗಸ್ವರ ಕೋಲೆ
ಅಬ್ಬರದಿಂದ ನಾಗಸ್ವರಂಗಳ
ಹೆಬ್ಬಾಗಿಲೊಳಗೆ ನುಡಿಸೋರು ಕೋಲೆ ೭೭

ಖಳನ ಬೆನ್ನ ಚರ್ಮ ಸುಲಿದು ಭೇರಿಗೆ ಹಾಕಿ
ಅಲವ ಬೋಧರೆ ಜಗದ್ಗುರು ಕೋಲೆ
ಅಲವ ಬೋಧರೆ ಜಗದ್ಗುರುಗಳೆಂತೆಂದು
ಛಲದಿಂದ ಭೇರಿಯ ಹೊಡಿಸೋರು ಕೋಲೆ ೭೮

ವಿಷ್ಣು ಸರ್ವೋತ್ತಮ ವಿಷ್ಣು ಪರದೇವತೆ
ವಿಷ್ಣುದಾಸರೆಂಬ ಬಿರುದಿನ ಕೋಲೆ
ವಿಷ್ಣುದಾಸರೆಂಬ ಬಿರುದಿನ ಠಕ್ಕೆಯ
ಘಟ್ಯಾಗಿ ಎತ್ತಿ ನಿಲಿಸೋರು ಕೋಲೆ ೭೯

ಮತದೊಳು ಮಧ್ವಮತ ವ್ರತದೊಳು ಹರಿದಿನ
ಕಥೆಯೊಳು ಭಾಗವತವೆನ್ನಿ ಕೋಲೆ
ಕಥೆಯೊಳು ಭಾಗವತವೆನ್ನಿ ಇದರಂತೆ
ಪ್ರತಿಮೆಯೊಳ್ ವಿಷ್ಣು ಪ್ರತಿಮೆನ್ನಿ ಕೋಲೆ ೮೦

*ಈಚಲ ಬನದೊಳು ಗೋಕ್ಷೀರ ಕುಡಿದಂತೆ
ನೀಚರ ಸಂಗ ಸುಜನರು ಕೋಲೆ
ನೀಚರ ಸಂಗ ಸುಜನರು ಮಾಡಲು
ಈಚೆ ನೋಡುವರಿಗೆ ಅನುಮಾನ ಕೋಲೆ ೮೧

ಸೂರಿ ಜನರ ಸಂಗ ಸುಧೆಯ ಪ್ರಾಶನೆಯಂತೆ
ಹೋರಣೆ ಗುಣವುಳ್ಳ ಅಧಮರ ಕೋಲೆ
ಹೋರಣೆ ಗುಣವುಳ್ಳ ಅಧಮರ ಸಹವಾಸ
ನೀರುಳ್ಳಿ ತಿಂದ ತೆರನಂತೆ ಕೋಲೆ ೮೨

---

*ಇಲ್ಲಿ ೮೧ರಿಂದ ೮೪ ರ ವರೆಗಿನ ನುಡಿಗಳಿಗೆ ಸಂದರ್ಭ ತೋರುವುದಿಲ್ಲ. ಇವು ಪ್ರಕ್ಷಿಪ್ತವಿರಬಹುದೆಂದು ಊಹಿಸಬೇಕಾಗುತ್ತದೆ. ಸಂ.

ಒಳ್ಳೆ ಮನುಜರ ಸಂಗ ಮಲ್ಲಿಗೆ ಮುಡಿದಂತೆ
ಖುಲ್ಲ ಕುಮತಿಯ ಸಹವಾಸ ಕೋಲೆ
ಖುಲ್ಲ ಕುಮತಿಯ ಸಹವಾಸ ಮಾಡಲು
ಮುಲ್ಲಂಗಿ ತಿಂದು ತೇಗಿದಂತೆ ಕೋಲೆ ೮೩

ಭಾವಜ್ಞರ ಸಂಗ ಶ್ಯಾವಿಗೆ ಉಂಡಂತೆ
ಭಾವವನರಿಯದ ಬಲುಹೀನ ಕೋಲೆ
ಭಾವವನರಿಯದ ಬಲುಹೀನರ ಸಂಗ
ಬೇವಿನ ಹಾಲ ಕುಡಿದಂತೆ ಕೋಲೆ ೮೪

ಬಾಳುವರ ಸಂಗ ಹಾಲೋಗರುಂಡಂತೆ
ಬಾಳುವೆಗೆಟ್ಟ ಅಧಮರ ಕೋಲೆ
ಬಾಳುವೆಗೆಟ್ಟ ಅಧಮರ ಸಹವಾಸ
ಹೇಳಬಾರದ್ದು ತಿಂದಂತೆ ಕೋಲೆ ೮೫

* ಹರಿದ್ರೋಹಿ ಗುರುದ್ರೋಹಿ ಮರಳಿ ಮಾತೃದ್ರೋಹಿ
ವರವೈಷ್ಣವದ್ರೋಹಿ ಪಿತೃದ್ರೋಹಿ ಕೋಲೆ
ವರವೈಷ್ಣವ ದ್ರೋಹಿ ಪಿತೃದ್ರೋಹಿ ಸ್ವಾಮಿದ್ರೋಹಿ
ನೆರಳು ಬಿದ್ದವರ ನೆರೆಹೊಲ್ಲ ಕೋಲೆ ೮೬

ಕತ್ತೆ ಕುದುರೆ ಒಂದೆ ಅತ್ತೆ ಸೊಸೆಯು ಒಂದೆ
ಹೆತ್ತಮ್ಮ ಒಂದೆ ಹೆಂಡತಿ ಒಂದೆ ಕೋಲೆ
ಹೆತ್ತಮ್ಮ ಒಂದೆ ಹೆಂಡತಿ ಒಂದಾದಮೇಲೆ
ವ್ಯರ್ಥವು ಮದುವೆ ನಿನಗ್ಯಾಕೆ ಕೋಲೆ ೮೭

ಅಕ್ಕ ತಂಗಿಯು ಒಂದೆ ಮಕ್ಕಳು ಸೊಸೆ ಒಂದೆ
ಚಿಕ್ಕಮ್ಮ ಒಂದೆ ಹೆಂಡತಿ ಒಂದೆ ಕೋಲೆ
ಚಿಕ್ಕಮ್ಮ ಒಂದೆ ಹೆಂಡತಿ ಒಂದಾದ ಮೇಲೆ
ರೊಕ್ಕ ವೆಚ್ಚಮಾಡಿ ಮದುವ್ಯಾಕೆ ಕೋಲೆ ೮೮

ನಾರಿ ರುಗ್ಮಿಣಿ ಸತ್ಯಭಾಮಾದೇವಿ ಮತ್ತೆ
ವಾರಿಜಮುಖಿಯರ್ ನಾಲ್ಕೆರಡು ಕೋಲೆ
ವಾರಿಜಮುಖಿಯರ್ ನಾಲ್ಕೆರಡು ಸಹಿತಾಗಿ
ವಾರಿಜನಾಭ ಕುಳಿತಿದ್ದ ಕೋಲೆ ೬೫

ಮಣನಾದ ಶ್ರೀಕೃಷ್ಣನರಮನೆಗೆ
ಸು ಭದ್ರೆ ಮುಯ್ಯಾತರುತಾಳೆ ಕೋಲೆ
ಸುಭದ್ರೆ ಮುಯ್ಯ ತರುತಾಳೆ ಹಸ್ತಿನಾಪುರ
ಭೂಭುಜರೆಲ್ಲ ಬರುತಾರೆ ಕೋಲೆ ೬೬

ಧರ್ಮ ಭೀಮಾರ್ಜುನ ನಕುಲ ಸಹದೇವರು
ಪ್ರೇಮಯಿಂದಲಿ ಪೊರವಂಟು ಕೋಲೆ
ಪ್ರೇಮಯಿಂದಲಿ ಪೊರವಂಟು ದಿಕ್ಪಾಲಕರು
ಕೂರ್ಮಯಿಂದಲಿ ಬರುತಾರೆ ಕೋಲೆ ೬೭

ಇದ್ರನು ಸಾಸ ಗಜೇಂದ್ರನೇರಿಕೊಂಡು
ಮಂದಗಮನೆ ಶಚಿ ಸಹಿತಲಿ ಕೋಲೆ
ಮಂದಗಮನೆ ಶಚಿಸಹಿತ ವಜ್ರವಧರಿಸಿ
ಉ-ಪೇಂದ್ರನರಮನೆಗೆ ಬರುತಾನೆ ಕೋಲೆ ೬೮

ಹುತಭುಜ ತನ್ನ ಸತಿ ಸ್ವಾಹಾದೇವಿಯು ಕೂಡಿ
ಅತಿಶಯದಿಂ ಮೇಷವೇರುತ್ತ ಕೋಲೆ
ಅತಿಶಯದಿಂ ಮೇಷವೇರಿ ಶಕ್ತಿಯ ಪಿಡಿದು
ಕ್ರತುಪತಿ ಮನೆಗೆ ಬರುತಾನೆ ಕೋಲೆ ೬೯

ಯಮನು ಮಹಿಷವೇರಿ ಗಮಕದಿಂದಲಿ ಸತಿ
ಶಾಮಲಾದೇವಿ ಸಹಿತಲಿ ಕೋಲೆ
ಶಾಮಲೆಸಹಿತ ದಂಡಾಯುಧ ಧರಿಸಿ
ರಾಮನಮನೆಗೆ ಬರುತಾನೆ ಕೋಲೆ ೭೦

ನಿರುರುತಿ ತಾನೊಂದು ನರನ ಪೆಗಲನೇರಿ
ಪರಮಾಪ್ತ ಸ್ತ್ರೀಯನೊಡಗೂಡಿ ಕೋಲೆ
ಪರಮಾಪ್ತ ಸ್ತ್ರೀಯನೊಡಗೂಡಿ ಕುಂತ ಧರಿಸಿ
ಧರಾಧರನ ಮನೆಗೆ ಬರುತಾನೆ ಕೋಲೆ ೨೧

ವರುಣನು ತಾನೊಂದು ಮಕರಿಯನೇರಿಕೊಂಡು
ಸಿರಿ ಭಾಗೀರಥಿಯನೊಡಗೊಂಡು ಕೋಲೆ
ಸಿರಿ ಭಾಗೀರಥಿಯನೊಡಗೊಂಡು ಪಾಶಧರಿಸಿ
ಸಿರಿವತ್ಸನರಮನೆಗೆ ಬರುತಾನೆ ಕೋಲೆ ೨೨

ಮರುತ ದೇವನೊಂದು ಎರಳೆಯ ಮೇಲೇರಿ
ತರುಣಿ ಪ್ರವಾಹಿಯೊಡಗೂಡಿ ಕೋಲೆ
ತರುಣಿ ಪ್ರವಾಹಿಯೊಡಗೂಡಿ ಧ್ವಜಧರಿಸಿ
ಶ್ರೀ-ಧರನ ಮನೆಗೆ ಬರುತಾನೆ ಕೋಲೆ ೨೩

ವಿತ್ತಪತಿಯೊಂದು ಉತ್ತಮ ಹಯವೇರಿ
ಚಿತ್ತದೊಲ್ಲಭೆಯ ಒಡಗೂಡಿ ಕೋಲೆ
ಚಿತ್ತದೊಲ್ಲಭೆಯ ಒಡಗೂಡಿ ಖಡ್ಗಧರಿಸಿ
ಕರ್ತನ್ನ ಮನೆಗೆ ಬರುತಾನೆ ಕೋಲೆ ೨೪

ಈಶಾನತಾನೊಂದು ವೃಷಭನೇರಿಕೊಂಡು
ಶ್ರೀಸತಿದೇವಿಯೊಡಗೂಡಿ ಕೋಲೆ
ಶ್ರೀಸತಿದೇವಿಯೊಡಗೂಡಿ ಶೂಲಧರಿಸಿ
ನಾ-ರಸಿಂಹನ ಮನೆಗೆ ಬರುತಾನೆ ಕೋಲೆ ೨೫

ಹರಿಯೆ ಸರ್ವೋತ್ತಮ ಹರಿಯೆ ಪರದೇವತೆ
ಹರಿದಾಸರೆಂಬೋ ಬಿರುದಿನ ಕೋಲೆ
ಹರಿದಾಸರೆಂಬೋ ಬಿರುದಿನ ಹೆಗ್ಗಾಳೆ
ಹಿರಿಬಾಗಿಲೊಳು ಹಿಡಿಸಿಹರು ಕೋಲೆ ೨೬

ಒಬ್ಬನೆ ವಿಷ್ಣುವಿನ್ನೊಬ್ಬ ದೈವಗಳಿಲ್ಲೆಂ
ದಬ್ಬರದಿಂದ ನಾಗಸ್ವರ ಕೋಲೆ
ಅಬ್ಬರದಿಂದ ನಾಗಸ್ವರಂಗಳ
ಹೆಬ್ಬಾಗಿಲೊಳಗೆ ನುಡಿಸೋರು ಕೋಲೆ ೭೭

ಖಳನ ಬೆನ್ನ ಚರ್ಮ ಸುಲಿದು ಭೇರಿಗೆ ಹಾಕಿ
ಅಲವ ಬೋಧರೆ ಜಗದ್ಗುರು ಕೋಲೆ
ಅಲವ ಬೋಧರೆ ಜಗದ್ಗುರುಗಳೆಂತೆಂದು
ಛಲದಿಂದ ಭೇರಿಯ ಹೊಡಿಸೋರು ಕೋಲೆ ೭೮

ವಿಷ್ಣು ಸರ್ವೋತ್ತಮ ವಿಷ್ಣು ಪರದೇವತೆ
ವಿಷ್ಣುದಾಸರೆಂಬ ಬಿರುದಿನ ಕೋಲೆ
ವಿಷ್ಣುದಾಸರೆಂಬ ಬಿರುದಿನ ಠಕ್ಕೆಯ
ಘಟ್ಯಾಗಿ ಎತ್ತಿ ನಿಲಿಸೋರು ಕೋಲೆ ೭೯

ಮತದೊಳು ಮಧ್ವಮತ ವ್ರತದೊಳು ಹರಿದಿನ
ಕಥೆಯೊಳು ಭಾಗವತವೆನ್ನಿ ಕೋಲೆ
ಕಥೆಯೊಳು ಭಾಗವತವೆನ್ನಿ ಇದರಂತೆ
ಪ್ರತಿಮೆಯೊಳ್ ವಿಷ್ಣು ಪ್ರತಿಮೆನ್ನಿ ಕೋಲೆ ೮೦

*ಈಚಲ ಬನದೊಳು ಗೋಕ್ಷೀರ ಕುಡಿದಂತೆ
ನೀಚರ ಸಂಗ ಸುಜನರು ಕೋಲೆ
ನೀಚರ ಸಂಗ ಸುಜನರು ಮಾಡಲು
ಈಚೆ ನೋಡುವರಿಗೆ ಅನುಮಾನ ಕೋಲೆ ೮೧

ಸೂರಿ ಜನರ ಸಂಗ ಸುಧೆಯ ಪ್ರಾಶನೆಯಂತೆ
ಹೋರಣೆ ಗುಣವುಳ್ಳ ಅಧಮರ ಕೋಲೆ
ಹೋರಣೆ ಗುಣವುಳ್ಳ ಅಧಮರ ಸಹವಾಸ
ನೀರುಳ್ಳಿ ತಿಂದ ತೆರನಂತೆ ಕೋಲೆ ೮೨

---

*ಇಲ್ಲಿ ೮೧ರಿಂದ ೮೪ರ ವರೆಗಿನ ನುಡಿಗಳಿಗೆ ಸಂದರ್ಭ ತೋರುವುದಿಲ್ಲ. ಇವು ಪ್ರಕ್ಷಿಪ್ತವಿರಬಹುದೆಂದು ಊಹಿಸಬೇಕಾಗುತ್ತದೆ. ಸಂ.

ಒಳ್ಳೆ ಮನುಜರ ಸಂಗ ಮಲ್ಲಿಗೆ ಮುಡಿದಂತೆ
ಖುಲ್ಲ ಕುಮತಿಯ ಸಹವಾಸ ಕೋಲೆ
ಖುಲ್ಲ ಕುಮತಿಯ ಸಹವಾಸ ಮಾಡಲು
ಮುಲ್ಲಂಗಿ ತಿಂದು ತೇಗಿದಂತೆ ಕೋಲೆ ೮೩

ಭಾವಜ್ಞರ ಸಂಗ ಶ್ಯಾವಿಗೆ ಉಂಡಂತೆ
ಭಾವವನರಿಯದ ಬಲುಹೀನ ಕೋಲೆ
ಭಾವವನರಿಯದ ಬಲುಹೀನರ ಸಂಗ
ಬೇವಿನ ಕಾಲ ಕುಡಿದಂತೆ ಕೋಲೆ ೮೪

ಬಾಳುವರ ಸಂಗ ಹಾಲೋಗರುಂಡಂತೆ
ಬಾಳುವೆಗೆಟ್ಟ ಅಧಮರ ಕೋಲೆ
ಬಾಳುವೆಗೆಟ್ಟ ಅಧಮರ ಸಹವಾಸ
ಹೇಳಬಾರದ್ದು ತಿಂದಂತೆ ಕೋಲೆ ೮೫

ಹರಿದ್ರೋಹಿ ಗುರುದ್ರೋಹಿ ಮರಳಿ ಮಾತೃದ್ರೋಹಿ
ಪರವೈಷ್ಣವದ್ರೋಹಿ ಪಿತೃದ್ರೋಹಿ ಕೋಲೆ
ಪರವೈಷ್ಣವ ದ್ರೋಹಿ ಪಿತೃದ್ರೋಹಿ ಸ್ವಾಮಿದ್ರೋಹಿ
ನೆರಳು ಬಿದ್ದವರ ನೆರೆಹೊಲ್ಲ ಕೋಲೆ ೮೬

ಕತ್ತೆ ಕುದುರೆ ಒಂದೆ ಅತ್ತೆ ಸೊಸೆಯು ಒಂದೆ
ಹೆತ್ತಮ್ಮ ಒಂದೆ ಹೆಂಡತಿ ಒಂದೆ ಕೋಲೆ
ಹೆತ್ತಮ್ಮ ಒಂದೆ ಹೆಂಡತಿ ಒಂದಾದಮೇಲೆ
ವ್ಯರ್ಥವು ಮದುವೆ ನಿನಗ್ಯಾಕೆ ಕೋಲೆ ೮೭

ಅಕ್ಕ ತಂಗಿಯು ಒಂದೆ ಮಕ್ಕಳು ಸೊಸೆ ಒಂದೆ
ಚಿಕ್ಕಮ್ಮ ಒಂದೆ ಹೆಂಡತಿ ಒಂದೆ ಕೋಲೆ
ಚಿಕ್ಕಮ್ಮ ಒಂದೆ ಹೆಂಡತಿ ಒಂದಾದ ಮೇಲೆ
ರೊಕ್ಕ ವೆಚ್ಚಮಾಡಿ ಮದುವ್ಯಾಕೆ ಕೋಲೆ ೮೮

ಹಿಟ್ಟು ಬೂದಿಯೊಂದೆ ರೊಟ್ಟಿ ಮುಚ್ಚಳಿಯೊಂದೆ
ಕಟ್ಟಿಗೆ ಒಂದೆ ಕಬ್ಬೊಂದೆ ಕೋಲೆ
ಕಟ್ಟಿಗೆಯೊಂದೆ ಕಬ್ಬೊಂದಾದಮೇಲೆ
ಕಟ್ಟಿಗೆ ಯಾಕೆ ಮೆಲುವಲ್ಲಿ ಕೋಲೆ ೮೯

ಹಾಲು ಮಜ್ಜಿಗೆಯೊಂದೆ ಕೋಳಿ ಕೋಗಿಲೆಯೊಂದೆ
ಮಾಳಿಗೆ ಒಂದೆ ಬಯಲೊಂದೆ ಕೋಲೆ
ಮಾಳಿಗೆ ಒಂದೆ ಬಯಲೊಂದಾದರೆ
ಹೇಳಬಾರದ್ದು ತಿನವಲ್ಲ್ಯಾಕೆ ಕೋಲೆ ೯೦

ಗಂಗೆಯ ತಡಿಯಲ್ಲಿ ಲಿಂಗವನರ್ಚಿಸಿ
ಅಂಗಯ್ಯಲಿಟ್ಟು ಪೂಜಿಸುವೆ ಕೋಲೆ
ಅಂಗಯ್ಯಲಿಟ್ಟು ಪೂಜಿಸುವೆ ಎಲೆಪಾಪಿ
ಲಿಂಗನು ನೀನು ಒಂದ್ಹ್ಯಾಗೆ ಕೋಲೆ ೯೧

ಶಿವನು ನೀನಾದರೆ ಶಿವನ ರಾಣಿ ನಿನಗೇನೊ
ಅವಿವೇಕಿ ಮನುಜ ಈ ಮಾತು ಕೋಲೆ
ಅವಿವೇಕಿ ಮನುಜ ಈ ಮಾತು ಕೇಳಿದರೆ
ಕವಿಗಳು ನಗರೆ ಕೈಹೊಯ್ದು ಕೋಲೆ ೯೨

ವೇದಾಪ್ರಾಮಾಣ್ಯವೆಂದು ಸುಜನರೆಲ್ಲರ
ಬೋಧಿಸುತಿಪ್ಪ ಬೌದ್ಧನ ಕೋಲೆ
ಬೋಧಿಸುತಿಪ್ಪ ಬೌದ್ಧನ ಎಳೆದೊಯ್ದು
ಕಾದೆಣ್ಣೆಯೊಳು ಕೆಡಹೋರು ಕೋಲೆ ೯೩

ಇಲ್ಲಿ ಮಾತ್ರ ಭೇದ ಅಲ್ಲಿ ಒಂದೇಯೆಂಬ
ಕ್ಷುಲ್ಲಕರ ಹಿಡಿದು ಹಲ್ಮುರಿದು ಕೋಲೆ
ಕ್ಷುಲ್ಲಕರ ಹಿಡಿದು ಹಲ್ಮುರಿದು ಯಮರಾಯ
ಕಲ್ಲುಗಾಣಕೆ ಹಾಕಿಸುವ ಕೋಲೆ ೯೪

ಅಪ್ಪ ನಾರಾಯಣ ನಿಪ್ಪಂಥ ಅರಮನೆ
ಅಪ್ರಾಕೃತದ ವೈಕುಂಠ ಕೋಲೆ
ಅಪ್ರಾಕೃತದ ವೈಕುಂಠವೆಂಬೋದು
ಸ್ವಪ್ರಕಾಶದ ಪರಮಾತ್ಮ ಕೋಲೆ ೯೫

ಸುತ್ತ ವಿರಜಾನದಿ ಮತ್ತೆ ಆನಂದವನ
ಚಿತ್ತಜನಯ್ಯನರಮನೆಗೆ ಕೋಲೆ
ಚಿತ್ತಜನಯ್ಯನರಮನೆಯೆಂಬೋದು
ಉತ್ತಮೋತ್ತಮ ವೈಕುಂಠ ಕೋಲೆ ೯೬

ಪಚ್ಚೆ ನೀಲ ವೈಡೂರ್ಯ ನಿಚ್ಚಳ ವಜ್ರ
ಅಚ್ಚಮಾಣಿಕದ ಅಳವಟ್ಟು ಕೋಲೆ
ಅಚ್ಚಮಾಣಿಕದ ಅಳವಟ್ಟು ಹರಿಪುರ
ಅಚ್ಯುತನಿಪ್ಪ ಅರಮನೆ ಕೋಲೆ ೯೭

ಸಿರಿದೇವಿ ತಾ ಮುರಹರನ ಪಟ್ಟಣದಲ್ಲಿ
ವಿರಜೆಯೆಂತೆಂದು ಕರೆಸೋಳು ಕೋಲೆ
ವಿರಜೆಯೆಂತೆಂದ ಕರೆಸಿ ವೈಕುಂಠಕ್ಕೆ
ಪರಿಘಾರೂಪದಲಿ ಮೆರೆವಳು ಕೋಲೆ ೯೮

ಉತ್ತರದಿ ನಾಲ್ಕು ತತ್ಥಳಿಸುವ ದ್ವಾರ
ಮುತ್ತು ಮಾಣಿಕ್ಯ ನವರತ್ನ ಕೋಲೆ
ಮುತ್ತು ಮಾಣಿಕ್ಯ ನವರತ್ನ ಝಲ್ಲಿಯ
ಎತ್ತಿ ಮೇಲ್ಕಟ್ಟು ಬಿಗಿದಿವೆ ಕೋಲೆ ೯೯

ಜಯವಿಜಯಾದ್ಯೆಂಟು ದ್ವಾರಪಾಲಕರು
ಜಯದೇವಿ ರಮಣನರಮನೆಗೆ ಕೋಲೆ
ಜಯದೇವಿ ರಮಣನರಮನೆ ಬಾಗಿಲೊಳು
ಜಯ ಜಯವೆನುತ ನಿಂದಾರೆ ಕೋಲೆ ೧೦೦

ಕಸವೆಲ್ಲ ಪರಿಮಳ ಕೆಸರೆಲ್ಲ ಶ್ರೀಗಂಧ
ಬಿಸರುಹನೇತ್ರನ ಅರಮನೆ ಕೋಲೆ
ಬಿಸರುಹನೇತ್ರನ ಅರಮನೆಯೊಳಗೆಲ್ಲ
ಕುಸುಮದ ಮಳೆಯುಗರೆವುದು ಕೋಲೆ ೧೦೧

ಕಾಜಿನ ನೆಲೆಗಟ್ಟು ರಾಜ ಮಾಣಿಕ್ಯಗೋಡೆ
ಈಜಡ ದ್ರವ್ಯವಲ್ಲಿಲ್ಲ ಕೋಲೆ
ಈಜಡ ದ್ರವ್ಯವಲ್ಲಿಲ್ಲ ಪುಸಿಯಲ್ಲ
ಶ್ರೀಜನಾರ್ದನನ ಅರಮನೆಯೊಳ್ ಕೋಲೆ ೧೦೨

ಸೂರ್ಯಚಂದ್ರಮ ಅಗ್ನಿ ಮೊದಲಾಗಿದ್ದವರ
ಕಾರ್ಯವೆ ಅಲ್ಲಿ ತಳುವಿಲ್ಲ ಕೋಲೆ
ಕಾರ್ಯವೆ ಅಲ್ಲಿ ತಳುವಿಲ್ಲ ನಮ್ಮ ಸುರ
ವರ್ಯ ಅಚ್ಯುತನರಮನೆಯೊಳು ಕೋಲೆ ೧೦೩

ಅಲ್ಲಿ ಸರ್ವರು ಸುಖದಲ್ಲಿ ಇಪ್ಪರುನೋಡೆ
ಅಲ್ಲಿ ಸರ್ವರು ಯಶಸ್ವಿಗಳು ಕೋಲೆ
ಅಲ್ಲಿ ಸರ್ವರು ಯಶಸ್ವಿಗಳು ಸಭೆಯೊಳು
ಎಲ್ಲರು ಸಹಾಯ ಪರರ್‍ಯೆಯ ಕೋಲೆ ೧೦೪

ಮಂಗಳವಂತರು ಶ್ರೀಮಂತರು ದಾರಿ
ದ್ರ್ಯಂಗಳ ಕಳೆದು ನಲಿವರು ಕೋಲೆ
ದಾರಿದ್ರ್ಯಂಗಳ ಕಳೆದು ನಲಿವರು ಮುಕ್ತಿ
ಯಂಗನೆಕೂಡಿ ಸುಖಿಸುವರು ಕೋಲೆ ೧೦೫

ಕಾಮಕ್ರೋಧ ದರ್ಪವೆಂಬ ಮಾತುಗಳಿಲ್ಲ
ಪ್ರೇಮವನ್ಯೋನ್ಯ ಮಿತ್ರತ್ವ ಕೋಲೆ
ಪ್ರೇಮವನ್ಯೋನ್ಯ ಮಿತ್ರತ್ವ ಮುಕ್ತರ
ಸ್ತೋಮವಿನ್ನೆಂತು ವರ್ಣಿಪೆ ಕೋಲೆ ೧೦೬

ಕಂಟಕವೆಂಬುದು ಕನಕ ಕೇತಕಿಯಲ್ಲಿ
ಉಂಟು ಸನ್ಯಾಸಿ ಕರದಂಡ ಕೋಲೆ
ಉಂಟು ಸನ್ಯಾಸಿ ಕರದಂಡ ಬದ್ಧ ವೈ
ಕುಂಠದೊಳುಳ್ಳವರ ಕರದಲ್ಲಿ ಕೋಲೆ ೧೦೭

ಬಂಜೆಯರಿಲ್ಲ ಪತಿಗಂಜದ ಸತಿಯಿಲ್ಲ
ಸಂಜೆಯಲಿ ಮಲಗುವವರಿಲ್ಲ ಕೋಲೆ
ಸಂಜೆಯಲಿ ಮಲಗುವವರಿಲ್ಲ ಅತಿಥಿಗಳು
ಭುಂಜಿಸಿ ಸುಖಿಸದವರಿಲ್ಲ ಕೋಲೆ ೧೦೮

ವಿಧವೆಯರಿಲ್ಲ ವಿಧುರ ಪುರುಷರಿಲ್ಲ
ಮದುವೆಯು ಇಲ್ಲದವರಿಲ್ಲ ಕೋಲೆ
ಮದುವೆಯು ಇಲ್ಲದವರಿಲ್ಲ ನಮ್ಮ ಶ್ರೀ
ಮಧುಸೂದನನಿಪ್ಪ ಪುರದಲ್ಲಿ ಕೋಲೆ ೧೦೯

ಅಂಧನಪುಂಸಕರಿಲ್ಲ ಮಂದಭಾಗ್ಯರು ಇಲ್ಲ
ನಿಂದನೆಮಾಡುವ ಜನರಿಲ್ಲ ಕೋಲೆ
ನಿಂದನೆಮಾಡುವ ಜನರಿಲ್ಲ ನಮ್ಮ ಮು
ಕುಂದನಿರುತಿಪ್ಪ ಪುರದಲ್ಲಿ ಕೋಲೆ ೧೧೦

ರೇತೋತ್ಸರ್ಜನವಿಲ್ಲ ಮೂತ್ರ ಪುರೀಷವಿಲ್ಲ
ವಾತಪಿತ್ತ ಶ್ಲೇಷ್ಮ ವೊದಲಿಲ್ಲ ಕೋಲೆ
ವಾತಪಿತ್ತ ಶ್ಲೇಷ್ಮ ವೊದಲಿಲ್ಲ ಹಸಿತೃಷೆ
ಯಾತುರವೆಂಬೋದಲ್ಲಿಲ್ಲ ಕೋಲೆ ೧೧೧

ಅಲ್ಲಿದ್ದ ತೃಣವೃಕ್ಷ ಅಚ್ಛೇದ್ಯಾಭೇದ್ಯವು
ಬಲ್ಲಸಜ್ಜನರ ಪುಣ್ಯಫಲ ಕೋಲೆ
ಬಲ್ಲ ಸಜ್ಜನರ ಪುಣ್ಯಫಲ ಕೋಲೆ
ಅಲ್ಲಿನಾಶಂಗಳಿಲ್ಲವು ಕೋಲೆ ೧೧೨

ಸಾರೂಪ್ಯ ಸಾಲೋಕ್ಯ ಸಾಮೀಪ್ಯ ಸಾಯುಜ್ಯ
ಸಾರಿಷ್ಣಿ ಪಂಚವಿಧ ಮುಕ್ತಿ ಕೋಲೆ
ಸಾರಿಷ್ಣಿಯೆಂಬೋದು ವಿರಿಂಚಿಯೊಬ್ಬಗೆ
ಈರೆರೆಡು ಮುಕ್ತಿ ಇತರರಿಗೆ ಕೋಲೆ ೧೧೩

ಅಲ್ಲಿ ಪಂಚವಿಧ ತಾರತಮ್ಯಗಳುಂಟು
ಅಲ್ಲಿ ನೀಚೋಚ್ಚಭಾವವು ಕೋಲೆ
ಅಲ್ಲಿ ನೀಚೋಚ್ಚಭಾವವು ಮುಕ್ತರು
ಬಲ್ಲ ಹಿರಿಯರ ಭಜಿಸೋರು ಕೋಲೆ ೧೧೪

ಆರಯೆಂದು ಅಣ್ಯಯೆಂದು ಎರಡು ಸುಧಾಂಬುಧಿ
ಇರುತಿಪ್ಪವಚ್ಯುತನ ಪುರದಲ್ಲಿ
ಇರುತಿಪ್ಪವಚ್ಯುತನ ಪುರದಲ್ಲಿ ಮುಕುತರು
ಸರಿ ಬಂದ ತೆರದಿ ಕ್ರೀಡಿಸುವರು ಕೋಲೆ ೧೧೫

ಉತ್ತರಗಡಲೊಳು ಹತ್ತೆಂಟು ಯೋಜನ
ಉತ್ತಮೋತ್ತಮ ಶ್ವೇತದ್ವೀಪ ಕೋಲೆ
ಉತ್ತಮೋತ್ತಮ ಶ್ವೇತ ದ್ವೀಪದೊಳಗೆಲ್ಲ
ಮುತ್ತಿನಂತ್ಹೊಳೆವ ಮುಕುತರು ಕೋಲೆ ೧೧೬

ಅನ್ನಂತಾಸನವೆಂಬೋದಿನ್ನೊಂದು ಮನೆ ಹರಿಗೆ
ಘನ್ನೋದಕದಮೇಲೆ ಮಿಂಚೋದು ಕೋಲೆ
ಘನ್ನೋದಕದಮೇಲೆ ಮಿಂಚೋದು ಅದರೊಳು
ಮನ್ನೆ ಮನ್ನೆಯಲಿ ಮುಕುತರು ಕೋಲೆ ೧೧೭

ಲಕ್ಷ ಯೋಜನದಮೇಲಿಪ್ಪುದನಂತಾಸನ
ಲಕ್ಷ್ಮೀಶನಿಹ ಶ್ವೇತದ್ವೀಪ ಕೋಲೆ
ಲಕ್ಷ್ಮೀಶನಿಹ ಶ್ವೇತ ದ್ವೀಪದೊಳಗೆ ಸ
ಲ್ಲಕ್ಷಣವಾಗಿಹರ್ ಮುಕುತರು ಕೋಲೆ ೧೧೮

ಸಿರಿ ವೈಕುಂಠದೊಳಗಿರುತಿಪ್ಪ ಮುಕುತರು
ವರ ಚತುರ್ಭುಜ ಪೀತಾಂಬರ ಕೋಲೆ
ವರ ಚತುರ್ಭುಜ ಪೀತಾಂಬರಗಳುಟ್ಟು
ಹರಿ ಸಾರೂಪ್ಯವ ಧರಿಸೋರು ಕೋಲೆ ೧೧೯

ಒಬ್ಬ ಬ್ರಹ್ಮನು ದೇವತಾರ್ಜನೆ ಮಾಡುವ
ಒಬ್ಬ ಬ್ರಹ್ಮನು ಅಗ್ನಿಹೋತ್ರವ ಕೋಲೆ
ಒಬ್ಬ ಬ್ರಹ್ಮನು ಅಗ್ನಿಹೋತ್ರ ಮಾಡುತ್ತಿರೆ
ಒಬ್ಬ ಬ್ರಹ್ಮನು ಪೇಳ್ವ ಪುರಾಣ ಕೋಲೆ ೧೨೦

ಕಂಜಾಕ್ಷಿ ರುಗ್ಮಿಣಿ ಕರೆಯೆ ಬರಲಿಲ್ಲ
ಸಂಜೆಯಲಿ ನಾವು ಬಂದೆವು ಕೋಲೆ
ಸಂಜೆಯಲಿ ನಾವು ಬಂದರೇನಾಯಿತು
ಅಂಜಬೇಡೌ ಅಭಯ ಕೊಡುತೇವೆ ಕೋಲೆ ೧೨೧

ಅತ್ತಿಗೆ ಮನೆಗೆ ಬಂದು ಹತ್ತು ಘಳಿಗಾಯಿತು
ಎತ್ತ ಓಡಿದಳೊ ನಮಗಂಜಿ ಕೋಲೆ
ಎತ್ತ ಓಡಿದಳೊ ನಮಗಂಜಿ ರುಗ್ಮಿಣಿ
ಇತ್ತ ಬಾ ಅಭಯ ಕೊಡುತೇವೆ ಕೋಲೆ ೧೨೨

ಅತ್ತಿಗೆ ನಿನ್ನ ಮೈಗೆ ಹತ್ಯವೆ ರುದ್ರಾಕ್ಷಿ
ನೆತ್ತಿ ಮೇಲೆಲ್ಲ ಜಡೆಗಳು ಕೋಲೆ
ನೆತ್ತಿ ಮೇಲೆಲ್ಲ ಜಡೆಗಳು ನಿನ್ನ ಜನ
ಅರ್ಥಿಲಿ ನೋಡಿ ನಗುತಾರೆ ಕೋಲೆ ೧೨೩

ಅಣ್ಣನ ಮನೆಗೆ ಬಂದು ಸಣ್ಣ ಹೊತ್ತಾಯಿತು
ಅಣ್ಣನ ಮಡದಿ ಬರಲಿಲ್ಲ ಕೋಲೆ
ಅಣ್ಣನ ಮಡದಿ ಬರಲಿಲ್ಲ ಸತ್ಯಭಾಮೆ
ಇನ್ನು ಬಾ ಅಭಯ ಕೊಡುತೇವೆ ಕೋಲೆ ೧೨೪

ತಾಯಿ ಮನೆಗೆ ಬಂದು ಬಹಳ ಹೊತ್ತಾಯಿತು
ತಾಯಿ ಸೊಸೇರು ಬರಲಿಲ್ಲ ಕೋಲೆ
ತಾಯಿ ಸೊಸೇರು ಬರಲಿಲ್ಲ ನಮಗಂಜಿ
ಬಾಯಿ ಬಿಡುತಾರೆ ಒಳಗೆಲ್ಲ ಕೋಲೆ ೧೨೫

ಬಂದ ಬೀಗಿತ್ತಿಯ ಚಂದದಿದಿರ್ಗೊಂಡು
ಮಂದಹಾಸದಲಿ ನುಡಿಸ್ಯಾಳೆ ಕೋಲೆ
ಚಂದದಿದಿರ್ಗೊಂಡು ನುಡಿಸ್ಯಾಳೆ ರುಗ್ಮಿಣಿ
ಬಂದವರು ಯಾರಾ ಮನೆಯವರು ಕೋಲೆ ೧೨೬

ಕುಂಡಾಲ ನಗರದ ಪಾಂಡುಭೂಪರ ಸೊಸೆ
ಗಂಡುಗಲಿ ಪಾರ್ಥನರ್ಧಾಂಗಿ ಕೋಲೆ
ಗಂಡುಗಲಿ ಪಾರ್ಥನರ್ಧಾಂಗಿ ಮುಯ್ಯವ
ಕೊಂಡು ಬಂದಳು ತಿರುಗಿಸು ಕೋಲೆ ೧೨೭

ಬಾರವ್ವ ಸುಭದ್ರಾ ಏರವ್ವ ಸೋಪಾನ
ತೋರವ್ವ ನಿನ್ನ ವಚನವ ಕೋಲೆ
ತೋರವ್ವ ನಿನ್ನ ವಚನವ ನೆನುತಲಿ
ಡೋರ್ಯದ ಕೈಯಹಿಡಿದಳು ಕೋಲೆ ೧೨೮

ಓಡಿಬಂದವಳು ಒಳಗೆ ಸೇರಿಕೊಂಡು
ನೋಡುವಳೆ ನಮ್ಮ ನುಡಿಸುವಳೆ ಕೋಲೆ
ನೋಡುವಳೆ ನಮ್ಮ ನುಡಿಸುವಳೆ ನಮ್ಮಣ್ಣ
ಮಾಡಿದ ಮೋಹ ತಲೆಗೇರಿತು ಕೋಲೆ ೧೨೯

ಅತ್ತೆಯ ಮಗಳೆಂದು ಹತ್ತೆಂಟು ತಾಳಿದೆ
ಉತ್ತರ ನಿಮಗೊಂದು ಕೊಡುತೇನೆ ಕೋಲೆ
ಉತ್ತರ ನಿಮಗೊಂದು ಕೊಡುತ್ತೇನೆ ಸುಭದ್ರೆ
ಚಿತ್ತಕ್ಕೆ ಹೋಗಿ ನೆಡುವಂತೆ ಕೋಲೆ ೧೩೦

ಓಡಿಬಂದಳೆಂದು ಆಡಿದರೇನು ತಿರು
ಗಾಡಿದರಿಷ್ಟು ಹುರುಡಿಲ್ಲ ಕೋಲೆ
ಆಡಿದರಿಷ್ಟು ಹುರುಡಿಲ್ಲ ಸು-ಭದ್ರೆ
ನೋಡಿಕೋ ನಿನ್ನ ಮನದೊಳು ಕೋಲೆ ೧೩೧

ಅಣ್ಣನ ವಂಚಿಸಿ ಓಡಿಬಂದವಳೆನ್ನ
ಕಣ್ಣಲಿನೋಡಿ ಕರೆಯುವಳೆ ಕೋಲೆ
ಕಣ್ಣಲಿ ನೋಡಿ ಕರೆಯಳವಳು ನಮ್ಮ
ಅಣ್ಣನ ಬಲವ ಹಿಡಕೊಂಡು ಕೋಲೆ ೧೩೨

ಅಣ್ಣನ ವಂಚಿಸಿ ಓಡಿಬಂದವಳೆಂದು
ಎನ್ನ ನೀನುಡಿವೆ ಸುಭದ್ರೆ ಕೋಲೆ
ಎನ್ನ ನೀನುಡಿವೆ ಸುಭದ್ರೆ ಕೇಳುನಾ
ಸನ್ಯಾಸಿಯೊಡನೆ ಬರಲಿಲ್ಲ ಕೋಲೆ ೧೩೩

ಕೂಲಿಕೊಟ್ಟು ನಿನ್ನ ಕುಲವನ್ನುದ್ಧರಿಸಿದೆ
ಏಳಲವಾದೆ ಸಭೆಯೊಳು ಕೋಲೆ
ಏಳಲವಾದೆ ಸಭೆಯೊಳ್ ನಮ್ಮಕ್ಕನ
ಕಾಲಿಗಾದಾರೂ ಹೋಲೀಯ ಕೋಲೆ ೧೩೪

ಒಂದನೆಂದು ಹನ್ನೊಂದ ನೆನ್ನಿಸಿಕೊಂಡೆ
ಕುಂದಿದವಲ್ಲೆ ನಿನ್ನ ಬಣ್ಣ ಕೋಲೆ
ಕುಂದಿದವಲ್ಲೆ ನಿನ್ನ ಬಣ್ಣ ಸುಭದ್ರೆ
ಬಂದ್ಹಾದಿ ಹಿಡಿದು ಮನೆಗ್ಹೋಗು ಕೋಲೆ ೧೩೫.

ಬಾಳೋರಮನೆ ಮುಂದೆ ಏನೊ ಕೂಗ್ಯಾಡಿದಂತೆ
ವೀಳ್ಯವ ಕೊಟ್ಟು ಏತರಲಿ ಕೋಲೆ
ವೀಳ್ಯವ ಕೊಟ್ಟು ಏತರಲಿ ಹಾಯಿಸಿಕೊಂಡೆ
ಹೇಳದೆ ಹೋಗೆ ಮನೆತನಕ ಕೋಲೆ ೧೩೬

ಆನೆಯ ಸಂಗಡ ಆಡು ಹುಲ್ಲುಮೆದ್ದರೆ
ಆನೆ ಹಿಂಗಾಲಲ್ಲೊದೆಯದೆ ಕೋಲೆ
ಆನೆ ಹಿಂಗಾಲಲ್ಲೊದೆಯದೆ ಸುಭದ್ರೆ
ರಾಣಿ ರುಗ್ಮಿಣಿಗೆ ಸರಿಯೇನೆ ಕೋಲೆ ೧೩೭

ಕುದುರೆಯ ಸಂಗದ ಕುರಿ ಹುಲ್ಲುಮೆದ್ದರೆ
ಕುದುರೆ ಹಿಂಗಾಲಿಂದೊದೆಯದೆ ಕೋಲೆ
ಕುದುರೆ ಹಿಂಗಾಲಿಂದೊದೆಯದೆ ಸುಭದ್ರೆ
ಸುದತಿ ರುಗ್ಮಿಣಿಗೆ ಸರಿಯೇನೆ ಕೋಲೆ ೧೩೮

ಬೀಗರಾಡಿದ ಬಲು ಬಿಂಕದ ನುಡಿಕೇಳಿ
ಸಾಗರಶಯನ ಮುರಿದೆದ್ದ ಕೋಲೆ
ಸಾಗರಶಯನ ಮುರಿದೆದ್ದ ಅರ್ಜುನ
ಹೇಗಿದೆ ನಿನ್ನ ಮನದೊಳು ಕೋಲೆ ೧೩೯

ಹುಚ್ಚುಕುಂದಿನ ಮಾತು ಆಡಿದೆ ನೀಕೇಳು
ಹುಚ್ಚಾಗಿ ಹೋದಿ ಸಭೆಯೊಳಗೆ ಕೋಲೆ
ಹುಚ್ಚಾಗಿ ಹೋದಿ ಸಭೆಯೊಳಗೆನ್ನುತ್ತ
ಅಚ್ಯುತಾನಂತನು ನುಡಿದನು ಕೋಲೆ ೧೪೦

ಏನೆಲೊ ಅರ್ಜುನ ಈ ನುಡಿ ನಿನಗೇಕೊ
ನೀನು ನಮ್ಮವಳು ತಿರುಗಿತಿರುಗಿ ಕೋಲೆ
ನೀನು ನಮ್ಮವಳು ತಿರುತಿರುಗಿ ಮಾರಿದರು
ಕಾಣಿಯ ಹೊಲವರಿಯಿರಿ ಕೋಲೆ ೧೪೧

ಆವುಕಾವನಿಗೆ ಯಾವಾಗ ಮೂರ್ ದುಡ್ಡು
ಭಾವ ನಿನಗೊಮ್ಮೆ ಧೊರೆತನ ಕೋಲೆ
ಭಾವ ನಿನಗೊಮ್ಮೆ ಧೊರೆತನ ಉಂಟಯ್ಯ
ನಾವೆ ಕೊಟ್ಟೇವು ತಕ್ಕೊಳ್ಳೊ ಕೋಲೆ ೧೪೨

ದನಗಾವಿ ನೀನೆತ್ತ ವನಜ ಕುಸುಮವೆತ್ತ
ಕನಕ ಕಬ್ಬಿಣಕೆ ಸರಿಯುಂಟೆ ಕೋಲೆ
ಕನಕ ಕಬ್ಬಿಣಕೆ ಸರಿಯುಂಟೆ ಅರ್ಜುನ
ನಿನಗೆ ಸುಭದ್ರೆ ಸರಿಯೇನೊ ಕೋಲೆ ೧೪೩

ದನಗಾವಿಯೆಂದರೆ ಎನಗೆ ಹೀನತೆಯಿಲ್ಲ
ಜನರೆಲ್ಲ ಬಲ್ಲರು ಈ ಮಾತು ಕೋಲೆ
ಜನರೆಲ್ಲ ಬಲ್ಲರು ಈ ಮಾತು ಭಾವಯ್ಯ
ನೆನಪು ಕೊಟ್ಟೆಲ್ಲೊ ಮರೆತಿದ್ದೆ ಕೋಲೆ ೧೪೪

ಗೋಪಾಲ ಶಬ್ದಾರ್ಥ ನೀ ಕೇಳು ಭಾವಯ್ಯ
ಕೋಪವಿನ್ಯಾಕೆ ಎನ್ನ ಮೇಲೆ ಕೋಲೆ
ಕೋಪವಿನ್ಯಾಕೆ ಎನ್ನ ಮೇಲೆ ನಿನ್ನ ಮಹಿಮೆ
ನೀ ಪೇಳಿಕೊಂಡೆ ನಿಷ್ಕಪಟ ಕೋಲೆ ೧೪೫

ಹೆಣ್ಣು ಕೊಟ್ಟನು ನಿನಗೆ ಕಣ್ಣು ಕಾಣದೆ ವನಧಿ
ಇನ್ನೆಲ್ಲಿ ವರನು ದೊರೆಯದೆ ಕೋಲೆ
ಇನ್ನೆಲ್ಲು ವರನು ದೊರೆಯದೆ ಇರಲಿಂಥಾ
ವನ್ನಿಗೆ ಕೊಟ್ಟವ ಹೆಡ್ಡನು ಕೋಲೆ ೧೪೬

ಕೊಟ್ಟರೇನಾಯಿತು ಇಟ್ಟಾಣೆ ಇಂಬಿಲ್ಲ
ಹುಟ್ಟುಗತಿಯಂತು ಮೊದಲಿಲ್ಲ ಕೋಲೆ
ಹುಟ್ಟುಗತಿಯಂತು ಮೊದಲಿಲ್ಲ ದಾನವ
ಕೊಟ್ಟ ಬಲೀಂದ್ರನಿದಕೆ ಸಾಕ್ಷಿ ಕೋಲೆ ೧೪೭

ಕುಲವಿಲ್ಲ ಗೋತ್ರವಿಲ್ಲ ನೆಲೆಯಿಲ್ಲ ಚಾರವಿಲ್ಲ
ಬಲುದೈತ್ಯರೊಳು ಹಗೆಗಾರ ಕೋಲೆ
ಬಲುದೈತ್ಯರೊಳು ಹಗೆಗಾರಿಂಥವನಿಗೆ
ಜಲಧೀಶ ಮಗಳ ಕೊಡಬಹುದೆ ಕೋಲೆ ೧೪೮

ಬಲುಮಂದಿ ಸವತೇರು ಮಲಮಕ್ಕಳೆಂಬೋರು
ನೆಲೆಯಿಲ್ಲವೀ ಜಗತ್ರಯದೊಳು ಕೋಲೆ
ನೆಲೆಯಿಲ್ಲವೀ ಜಗತ್ರಯದೊಳು ನಮ್ಮ ಶ್ರೀ
ಲಲನೆಗೆ ತಕ್ಕ ವರನೇನು ಕೋಲೆ ೧೪೯

ಚಿಕ್ಕವನೆಂಬೆನೆ ಲೆಕ್ಕವಿಲ್ಲದ ವೃದ್ಧ
ರೊಕ್ಕ ರೂಪಾಯಿಗಳಿವಗಿಲ್ಲ ಕೋಲೆ
ರೊಕ್ಕ ರೂಪಾಯಿಗಳಿವಗಿಲ್ಲ ಇಂಥವಗೆ
ಅಕ್ಕರದಿ ಹೆಣ್ಣು ಕೊಡಬಹುದೆ ಕೋಲೆ ೧೫೦

ಕುದುರೆ ಮೋರೆಯ ಉರಿಗಣ್ಣಿನ ವರನಿಗೆ
ಇದಿರು ಹೆಣ್ಣಿಗಾಗಿ ಮನಸೋತ ಕೋಲೆ
ಇದಿರು ಹೆಣ್ಣಿಗಾಗಿ ಮನಸೋತು ಕೊಟ್ಟಮೇಲೆ
ಬದಲು ಮಾತಾಡಿ ಫಲವೇನು ಕೋಲೆ ೧೫೧

ಮಗಳ ಕೊಟ್ಟೆಹೆನೆಂದು ಮಮಕಾರದಿಂದಲಿ
ಸುಗುಣ ಸಮುದ್ರ ಉಳುಹಿದ ಕೋಲೆ
ಸುಗುಣ ಸಮುದ್ರ ಉಳುಹಿದ ಅಹಿರೋಷ
ಖಗರಾಜನಿಂದ ಕೈಗಾಯ್ತು ಕೋಲೆ ೧೫೨

ಹಾರುವ ಖಗರಾಜ ಹಾರ್ವಾಕಿ ಪೋಗುವ
ಮೂರುತಿ ಕರವ ನೆಗಹಿದ ಕೋಲೆ
ಮೂರುತಿ ಕರವ ನೆಗಹಿದ ಕಾರಣ
ಹಾರುವ ಗರುಡ ಕೈಗಾಯ್ದ ಕೋಲೆ ೧೫೩

ವಾರಿಧಿಯೊಳು ಮನೆ ಹಾವಿನ ಮೇಲ್ ನಿದ್ರೆ
ಹಾರುವ ಹದ್ದಿನ ಏರುವ ಕೋಲೆ
ಹಾರುವ ಹದ್ದಿನ ಏರುವೆನೆಂಬಂಥ
ತೋರ ಅಹಂಕಾರ ನಿನಗೇಕೆ ಕೋಲೆ ೧೫೪

ಹಾರುವ ಹದ್ದಿನ ಏರಿ ತಿರುಗಾಡುವಾಗ
ಜಾರಿಬಿದ್ದರೆ ತೆರನೇನು ಕೋಲೆ
ಜಾರಿಬಿದ್ದರೆ ತೆರನೇನು ಇವಗೆ ಬುದ್ಧಿ
ಯಾರು ಪೇಳ್ವರು ಜಗದೊಳಗೆ ಕೋಲೆ ೧೫೫

ಭರದಿಂದ ನಿನ್ನೆದೆ ಬಿರಿಯಲೊದ್ದನು ಋಷಿ
ದುರುಳ ಶಿಶುಪಾಲ ಸಭೆಯೊಳು ಕೋಲೆ
ದುರುಳ ಶಿಶುಪಾಲ ಸಭೆಯೊಳು ಬೈದದ್ದು
ಸಿರಿಬಂತು ಎನ್ನ ಮನಸಿಗೆ ಕೋಲೆ ೧೫೬

ದಾನವಾಂತಕನೆಂದು ಪೊಗಳೋರು ಜಗದೊಳು
ಕಾಣದೆ ಕಣ್ಣು ತಿಳಿಯದೆ ಕೋಲೆ
ಕಾಣದೆ ಕಣ್ಣು ತಿಳಿಯದೆ ಜನಗಳು
ಮಾನ್ಯ ಗುಣಂಗಳ ನರಿಯದೆ ಕೋಲೆ ೧೫೭

ಕಾಲಯವನನು ಕಲಹ ಕೊಡಲಿ ಬಂದರೆ ಕೃಷ್ಣ
ಮೂಲೆಯಲಿ ಹೋಗಿ ಅಡಗಿದೆ ಕೋಲೆ
ಮೂಲೆಯಲಿ ಹೋಗಿ ಅಡಗಿದೆ ಮುಚುಕುಂದ
ವಾಲಯದಲಿ ನಿನ್ನ ಉಳುಹಿದ ಕೋಲೆ ೧೫೮

ಭೇರಿ ಬಾರಿಸೆ ಬರಲು ಧೀರ ಜರೆಯ ಸುತಗೆ
ಮೋರೆ ತೋರದೆ ಕಳ್ಳವೇಷದಿ ಕೋಲೆ
ಮೋರೆ ತೋರದೆ ಕಳ್ಳವೇಷದಿ ಬಂದಿರೆ ವೀರ
ಮೂರುತಿ ಜೈಸಿ ಉಳುಹಿದ ಕೋಲೆ ೧೫೯

ನಂದನವನ ಪೊಕ್ಕು ಸುರತರು ತರುವಾಗ
ಇಂದ್ರನು ಬಂದಿದ್ದ ಜಗಳಕ್ಕೆ ಕೋಲೆ
ಇಂದ್ರನು ಬಂದಿದ್ದ ಜಗಳಕ್ಕೆ ನಮ್ಮಕ್ಕ
ನಿಂದ ನಿನ್ನಭಿಮಾನ ಉಳಿಯಿತು ಕೋಲೆ ೧೬೦

ಅಂದು ದುರ್ಯೋಧನ ಸಭೆಯೊಳು ಕಟ್ಟಲು
ಅಂದು ನಮ್ಮಿಂದ ಉಳಿದಲ್ಲೊ ಕೋಲೆ
ಅಂದು ನಮ್ಮಿಂದ ಉಳಿದಲ್ಲೊ ಭಾವಯ್ಯ
ಅಂದಿನ ಭವಣೆ ಮರೆತೇನೊ ಕೋಲೆ ೧೬೧

ಜರೆಯ ಸುತನಿಗಂಜಿ ಮಧುರೆಯೊಳಿರದೆ
ಹೊರಟೋಡಿದೆ ಗೋಮಂತಕಕೆ ಕೋಲೆ
ಹೊರಟೋಡಿದೆ ಗೋಮಂತಕಕೆ ಹಿಂದೆಪಟ್ಟ
ಕರೆ ಕರೆಯನೆಲ್ಲ ಮರೆತೆಯ ಕೋಲೆ ೧೬೨

ಇದಿರಾಗಿ ಇದ್ದು ಕಾದಿ ಒಬ್ಬರನಾದರೂ
ಮಧುವೈರಿ ನೀನು ಗೆಲಲಿಲ್ಲ ಕೋಲೆ
ಮಧುವೈರಿ ನೀನು ಗೆಲಲಿಲ್ಲ ಸರ್ವರ
ಸದೆದೆ ಮಾರ್ಮಲಚಿ ವಂಚಿಸಿ ಕೋಲೆ ೧೬೩

ಮೂರು ಗುಣಂಗಳ ಮೀರಿದವನಿವ
ಮೂರು ಮನೆ ಚಿಂಚಿಯೆನಿಸುವ ಕೋಲೆ
ಮೂರು ಮನೆ ಚಿಂಚಿಯೆನಿಸುವ ನಿವನಮಹಿಮೆ
ಯಾರು ಬಲ್ಲರು ಜಗದೊಳು ಕೋಲೆ ೧೬೪

ಕ್ಷೀರಸಾಗರಶಯನಯೆಂದರೆ ಹಿಗ್ಗುವಿ
ಯಾರು ಅರಿಯರೆ ನಿನ್ನ ಹುಳುಕನು ಕೋಲೆ
ಯಾರು ಅರಿಯರೆ ನಿನ್ನ ಹುಳುಕು ಅತ್ತೆಯ ಮನೆಯ
ಸೇರಿ ಇದ್ದುದನರಿಯರೆ ಕೋಲೆ ೧೬೫

ಪಾಲು ಮೊಸರು ಕದ್ದು ಬಾಲೇರೆಲ್ಲರ ಕೆಡಿಸಿ
ಕಾಲು ಒರಳಿಗೆ ಕಟ್ಟಿಸಿಕೊಂಡೆ ಕೋಲೆ
ಕಾಲು ಒರಳಿಗೆ ಕಟ್ಟಿಸಿಕೊಂಡದ್ದು
ಭೂಲೋಕದಲ್ಲಿ ಮರೆತೇನೆ ಕೋಲೆ ೧೬೬

ಬೆಣ್ಣೆ ಮೊಸರು ಕದ್ದು ಕನ್ಯೆರೆಲ್ಲರ ಕೆಡಿಸಿ
ಮುನ್ನೆ ತೊತ್ತಿನ ಮನೆಯಲ್ಲಿ ಕೋಲೆ
ಮುನ್ನೆ ತೊತ್ತಿನ ಮನೆಯಲ್ಲಿ ಉಂಡು ಹಿಂದೆ
ಹೆಣ್ಣಾಗಿದ್ದದ್ದು ಮರೆತೇನೆ ಕೋಲೆ ೧೬೭

ಅಪಾರ ನಾರೇರ ಒಗೆತನಕೆ ನೀರ್‌ತಿದ್ದಿ
ವ್ಯಾಪಾರ ಬಹಳ ನಡೆಸಿದೆ ಕೋಲೆ
ವ್ಯಾಪಾರ ಬಹಳ ನಡೆಸಿದೆ ಶ್ರೀಕೃಷ್ಣ
ಅಪಾರ ಮಹಿಮೆಗೆ ನಮೊ ಎಂಬೆ ಕೋಲೆ ೧೬೮

ಸ್ಮರಮಣನೆಂತೆಂದು ಸುಖಿಸುತ್ತ ಹೆದ್ದೈವ
ಕರಡಿ ಮಗಳ ತಂದು ಮದುವ್ಯಾದೆ ಕೋಲೆ
ಕರಡಿ ಮಗಳ ತಂದು ಮದುವ್ಯಾದೆ ಚಂಚುತ್ತಿ
ಯೊಡಗೂಡಿ ಅವಳ ನೆರೆವರೆ ಕೋಲೆ ೧೬೯

ನಾರುವ ಮೈಯವ ನೀರೊಳಗಡಗಿಹ
ಮೋರೆ ಹಂದಿಯವ ಬಲು ಕೋಪಿ ಕೋಲೆ
ಮೋರೆ ಹಂದಿಯವ ಬಲುಕೋಪಿ ತಿರತಿಂಬ
ಹಾರುವನ ಗೊಡವೆ ನಮಗೇಕೆ ಕೋಲೆ ೧೭೦

ಕೊಡಲಿ ಪಿಡಿದು ತನ್ನ ಪಡೆದ ಮಾತೆಯ ಕೊಂದು
ಕಡಲ ಬಂಧಿಸಿ ಮಡದಿಯ ಕೋಲೆ
ಕಡಲ ಬಂಧಿಸಿ ಮಡದಿಯ ಕೊಂಡು ಬಂದು
ಅಡವಿಗಟ್ಟಿದ ಮಹಮಹಿಮ ಕೋಲೆ ೧೭೧

ಜಾರ ಚೋರನೆಂದು ಜಗದೊಳು ಪೆಸರಾದ
ಅ-ಪಾರವಾಗಿದ್ದ ವನಿತೇರ ಕೋಲೆ
ಅ-ಪಾರವಾಗಿದ್ದ ಗೋಪೇರ ಪಾಲ್ಮೊಸರ
ಚೋರತನದಲ್ಲಿ ಕೆಡಿಸಿದೆ ಕೋಲೆ ೧೭೨

ಭಂಡನಂದದಲಿ ಬತ್ತಲೆ ತಿರುಗುತ್ತ
ಪುಂಡುಗಾರನಂತೆ ಹಯವೇರಿ ಕೋಲೆ
ಪುಂಡುಗಾರನಂತೆ ಹಯವೇರಿ ಹೋಕದ
ಲಂಡರಗೊಡವೆ ನಮಗೇಕೆ ಕೋಲೆ ೧೭೩

ಶಬರಿಯೆಂಜಲ ತಿಂದೆ ಕುಬುಜೆಯ ಕೂಡಿದೆ
ಅಬುಜದಳಾಕ್ಷಾಷ್ಟ ಮಹಿಷೇರ ಕೋಲೆ
ಅಬುಜದಳಾಕ್ಷಾಷ್ಟ ಮಹಿಷೆಯರಿಗೆ
ಪ್ರಭುವಾದವಗೆ ಬಹು ನೀತವೆ ಕೋಲೆ ೧೭೪

ಸ್ವಾರಿ ಪೋಗಲು ಬಲುದೂರ ವೈಕುಂಠವು
ಯಾರು ಪೋದರು ಹಿಂದಿರುಗರು ಕೋಲೆ
ಯಾರು ಪೋದರು ಹಿಂದಿರುಗಿ ಮರಳಿ ಸುದ್ದಿ
ಯಾರು ತರರು ಏನಾದರೂ ಕೋಲೆ ೧೭೫

ಹೆತ್ತ ಮಗಳನಿತ್ತ ಅತ್ತೆಯ ಬಿಡದವ
ಮತ್ತೆ ಪರಹೆಣ್ಣುಗಳ ಬಿಡುವನೆ ಕೋಲೆ
ಮತ್ತೆ ಪರಹೆಣ್ಣುಗಳ ಬಿಡುವನೆ ಇವ ತನ್ನ
ಅರ್ಥಿಯ ಮಗಳ ಮದುವ್ಯಾದ ಕೋಲೆ ೧೭೬

ತಲೆಹೊಡಕ ಹಿರೇಮಗ ಕಿರಿಮಗ ಚಂಚಲ
ಬಲು ಚಾಡಿಗೇಡಿ ಮೊಮ್ಮಗ ಕೋಲೆ
ಬಲು ಚಾಡಿಗೇಡಿ ಮೊಮ್ಮಗನೆಂದು
ಫಲುಗುಣ ನಗುತ ನುಡಿದನು ಕೋಲೆ ೧೭೭

ಹೊರಗಿನಿಂದ ಬಂದಳು ತಿರುಗಾಲ ತಿಪ್ಪಿಯು
ಹೆರರಿಗುಪಕಾರಿ ಮನೆಮಾರಿ ಕೋಲೆ
ಹೆರರಿಗುಪಕಾರಿ ಮನೆಮಾರಿ ಹಡೆದ್ದಡೆದು
ತರಳರನೆಲ್ಲ ಎಸೆದಳು ಕೋಲೆ ೧೭೮

ಬಲು ಭಾಗ್ಯವೆಂತೆಂದು ಜಗವೆಲ್ಲ ಮೆಚ್ಚಲು
ತಲೆಯಲ್ಲಿ ಹೊತ್ತ ಮಹದೇವ ಕೋಲೆ
ತಲೆಯಲ್ಲಿ ಹೊತ್ತ ಮಹದೇವ ಇಂಥವಳ
ಬಲು ಪಾತಿವ್ರತ್ಯವ ನೋಡಿದ್ಯ ಕೋಲೆ ೧೭೯

ನಿಲ್ಲು ನಿಲ್ಲೆಲೊ ನಿನ್ನ ಸೊಸೆಯೆಂಬುವಳು
ಎಲ್ಲರ ಬಾಯಿಗೆ ಬರುವಳು ಕೋಲೆ
ಎಲ್ಲರ ಬಾಯಿಗು ಬರುವಳು ಇಷ್ಟಿರಲು
ಒಳ್ಳೇದೆ ನಿನ್ನಯ ಮನೆತನ ಕೋಲೆ ೧೮೦

ಮಗನ ಮಗನು ಬಲು ಕೊಂಡೆಗಾರನಾದ
ಮಗಳ ಮಗನು ನಿನ್ನ ಎದೆಗೆಚ್ಚ ಕೋಲೆ
ಮಗಳ ಮಗನು ನಿನ್ನ ಎದೆಗೆಚ್ಚಿದ್ದು ಕಂಡು
ನಗುತಾರೆ ನಿನ್ನ ಸರಿಯವರು ಕೋಲೆ ೧೮೧

ರುದ್ರ ಬ್ರಹ್ಮಹತ್ಯಗಾರ ಕ್ಷುದ್ರ ಬಲೀಂದ್ರರು
ಕದ್ದ ಸುವರ್ಣದ ಮಕುಟವ ಕೋಲೆ
ಕದ್ದ ಸುವರ್ಣದ ಮಕುಟವ ಬಲರಾಮ
ಮದ್ಯಪಾಯಿ ಇನ್ನು ನುಡಿದೇನು ಕೋಲೆ ೧೮೨

ಚಂದ್ರ ಗುರುತಲ್ಪಗ ಇಂದ್ರ ತತ್ಪರಿಯೋಗ
ಚಂದುಳ್ಳ ಬಳಗ ನಿನಗಿವರು ಕೋಲೆ
ಚಂದುಳ್ಳ ಬಳಗ ನಿನಗಿವರು ಎನುತಲಿ
ಮಂದಹಾಸದಿ ನುಡಿದನು ಕೋಲೆ ೧೮೩

ಮಾತೃದ್ರೋಹಿ ನಾರದ ಪಿತೃದ್ರೋಹಿ ಪ್ರಹ್ಲಾದ
ಭ್ರಾತೃದ್ರೋಹಿ ವಿಭೀಷಣನು ಕೋಲೆ
ಭ್ರಾತೃದ್ರೋಹಿ ವಿಭೀಷಣ ಮುಖ್ಯರು ಪ್ರೇಮ
ಪಾತ್ರರಾದರು ನಿನಗದರಿಂದ ಕೋಲೆ ೧೮೪

ಸ್ವಾಮಿದ್ರೋಹಿ ಅಕ್ರೂರ ಗುರುದ್ರೋಹಿ ಧರ್ಮಜ
ಬ್ರಹ್ಮದ್ರೋಹಿಗಳು ಯಾದವರು ಕೋಲೆ
ಬ್ರಹ್ಮದ್ರೋಹಿಗಳು ಯಾದವರಿಂದವರಿಗೆಲ್ಲ
ಸ್ವಾಮಿಯೆಂದು ನೀನೆನಿಸುವಿ ಕೋಲೆ ೧೮೫

ಅತ್ತೆಯಮಗನೆಂದು ಮತ್ತೆ ತಂಗಿಯ ಕೊಟ್ಟು
ಅರ್ಥಿಲಿ ರಥವನಡೆಸಿದೆ ಕೋಲೆ
ಅರ್ಥಿಲಿ ರಥವ ನಡೆಸಿದುಪಕಾರವ
ಎತ್ತಲು ದಾನವ ತಿರುಹಿದೆ ಕೋಲೆ ೧೮೬

ಗುಣನಿಧಿ ನಿನ್ನ ದುರ್ಗುಣಿಯೆಂದು ಪೇಳಿದೆ
ಎಣಿಸದಿರೆನ್ನ ಅಪರಾಧ ಕೋಲೆ
ಎಣಿಸದಿರೆನ್ನ ಅಪರಾಧವೆನುತಲಿ
ಮಣಿದನು ಶ್ರೀಹರಿ ಚರಣಕ್ಕೆ ಕೋಲೆ ೧೮೭

ಸ್ವಾಮಿ ಭೃತ್ಯನ್ಯಾಯವರಿಯದೆ ನಾನಿನ್ನ
ಪಾಮರನಂತೆ ನುಡಿದೆನು ಕೋಲೆ
ಪಾಮರನಂತೆ ನುಡಿದಪರಾಧವ
ಶ್ರೀಮನೋಹರನೆ ಮನ್ನಿಸು ಕೋಲೆ ೧೮೮

ನಿನ್ನ ನಾಮ ಮುದ್ರೆ ಧರಿಸಿದ ದಾಸರು
ಉನ್ನಂತ ಪಾಪವ ಮಾಡಲು
ಉನ್ನಂತ ಪಾಪವ ಮಾಡಲು ಪರಿಹರಿಸಿ
ಮನ್ನಿಸಿ ಪೊರೆವುದು ನಿನ್ನ ನಾಮ ಕೋಲೆ ೧೮೯

ಬಡನಡುನಡುಗುತ ಕುಚಗಳಲ್ಲಾಡಿಸುತ
ಮುಡಿದ ಪುಷ್ಪಗಳು ಉದುರುತ ಕೋಲೆ
ಮುಡಿದ ಪುಷ್ಪಗಳು ಉದುರುತ ಅಣ್ಣನ
ಅಡಿಗಳಿಗೆರಗಿದಳು ಸುಭದ್ರೆ ಕೋಲೆ ೧೯೦

ಹೆಣ್ಣು ಕೊಟ್ಟ ಮೇಲೆ ಹಿತವೆ ಚಿಂತಿಸಬೇಕು
ಇನ್ನು ನುಡಿದುದರಿಂದ ಫಲವೇನು ಕೋಲೆ
ಇನ್ನು ನುಡಿದುದರಿಂದೆ ಫಲವೇನು ಅಣ್ಣಯ್ಯ
ಎನ್ನ ಕಡೆ ನೋಡಿ ಮನ್ನಿಸು ಕೋಲೆ ೧೯೧

ಜಾಂಬೂನದಾಂಬರ ನಿನಗೆ ತಂದೆನೊ ಸ್ವಾಮಿ
ಜಾಂಬವತೀಶ ಸ್ವೀಕರಿಸು ಕೋಲೆ
ಜಾಂಬವತೀಶ ಸ್ವೀಕರಿಸಿ ನಮಗಿನ್ನು
ಇಂಬು ವೈಕುಂಠದಿ ಕೊಡಬೇಕು ಕೋಲೆ ೧೯೨

ಏನವ್ವ ಸುಭದ್ರೆ ಈ ನುಡಿ ನಿನಗೇಕೆ
ನೀನು ನಿನ್ನಿಂದ ನಿಮ್ಮವರು ಕೋಲೆ
ನೀನು ನಿನ್ನಿಂದ ನಿಮ್ಮವರು ಎನ್ನ
ಪ್ರಾಣಪದಕವೆನುತಿಹೆ ಕೋಲೆ ೧೯೩

ಮೊದಲೆ ಅತ್ತೆಯಮಗ ಅದರಿಂದ ನಿನ್ನ ಕೊಟ್ಟೆ
ಹೆದರುವರೆ ಅವರು ನಮಗಿನ್ನು ಕೋಲೆ
ಹೆದರುವರೆ ಅವರು ನಮಗಿನ್ನು ಎನುತಲಿ
ಮುದದಿಂದ ಕೇಳಿ ನಗುತಿದ್ದ ಕೋಲೆ ೧೯೪

ಅತ್ತಿಗೆ ನೀ ನಮ್ಮ ಹೆತ್ತತಾಯಿ ಸರಿಯಮ್ಮ
ಅತ್ಯಂತ ನಾನು ನುಡಿದೆನು ಕೋಲೆ
ಅತ್ಯಂತ ನಾನು ನುಡಿದಪರಾಧವ
ಚಿತ್ತದೊಳಿಡದೆ ಕರುಣಿಸು ಕೋಲೆ ೧೯೫

ದೇವಿರುಕ್ಮಿಣಿ ನೀ ದೇವಕಿ ಸರಿಯಮ್ಮ
ನಾ ವಿಗಡ ಬುದ್ಧಿಯಲಿ ನುಡಿದೆನು ಕೋಲೆ
ನಾ ವಿಗಡ ಬುದ್ಧಿಯಲಿ ನುಡಿದಪರಾಧವ
ಭಾವದೊಳಿಡದೆ ಪಾಲಿಸು ಕೋಲೆ ೧೯೬

ಸುಗುಣ ಸಾಕಾರಿಯೆ ನಿಗಮಾಭಿಮಾನಿಯೆ
ವಿಗಡ ಬುದ್ಧಿಯಲಿ ನುಡಿದೆನು ಕೋಲೆ
ವಿಗಡ ಬುದ್ಧಿಯಲಿ ನುಡಿದೆನು ನಾ ನಿನ್ನ
ಮಗಳು ಭಾಗೀರಥಿ ಸರಿಯೆನ್ನು ಕೋಲೆ ೧೯೭

ಸಿಂಧುಜಾತೆ ದೇವಿ ಮಂದರುದ್ಧಾರಿಯೆ
ಮಂದಮತಿಯಲ್ಲಿ ನುಡಿದೆನು ಕೋಲೆ
ಮಂದಮತಿಯಲ್ಲಿ ನುಡಿದಪರಾಧಗ
ಳೊಂದೆಣಿಸದೆ ಕರುಣಿಸು ಕೋಲೆ ೧೯೮

ಸರಿಯಲ್ಲದವಳು ಸರಿಯೆಂದು ನುಡಿದೆನು
ಹಿರಿಯತ್ತೆ ಮಗಳೆ ನಮಗಿನ್ನು ಕೋಲೆ
ಹಿರಿಯತ್ತೆ ಮಗಳೆ ನಮ್ಮಿಂದ ತಪ್ಪೆಂದು
ಚರಣಕ್ಕೆರಗಿದಳು ಸುಭದ್ರೆ ಕೋಲೆ ೧೯೯

ಎರಗಿದ ನಾದಿನಿಯು ಕರಗಳ ಪಿಡಿದೆತ್ತಿ
ಭರದಿ ತಕ್ಕೈಸಿ ರುಗ್ಮಿಣಿ ಕೋಲೆ
ಭರದಿ ತಕ್ಕೈಸಿ ರುಗ್ಮಿಣಿ ಸುಭದ್ರೆ!
ಧೊರೆಮಗಳೆ ನಮಗೆ ಎರಗುವಿಯು ಕೋಲೆ ೨೦೦

ಬ್ರಹ್ಮೇಶ ಶಕ್ರರವಿ ಧರ್ಮಶಶಾಂಕ ಪೂರ್ವ
ಸುಮ್ಮನಸ ಸಂತತಿ ಮೊದಲಾಗಿ ಕೋಲೆ
ಸುಮ್ಮನಸ ಸಂತತಿ ಮೊದಲಾಗಿ ಶ್ರೀದೇವಿ
ನಿಮ್ಮ ಕಟಾಕ್ಷ ಬಯಸುವರು ಕೋಲೆ ೨೦೧

ಅಂದರೇನಮ್ಮ ನಿನ್ನ ಕಂದ ಹಿಡಿವರಾರು
ಮಂದರೋದ್ಧರನ ಕಿರುತಂಗಿ ಕೋಲೆ
ಮಂಧರೋದ್ಧರನ ಕಿರುತಂಗಿ ಸುಭದ್ರೆ
ಗಂಧ ಕುಂಕುಮವ ಧರಿಸಮ್ಮ ಕೋಲೆ ೨೦೨

ನುಡಿದರೆಮ್ಮ ತಪ್ಪು ಹಿಡಿವರಾರು ನಿನ್ನ
ಕಡಲಶಯನನ ಕಿರುತಂಗಿ ಕೋಲೆ
ಕಡಲಶಯನನ ಕಿರುತಂಗಿ ಸುಭದ್ರೆ
ಉಡಿಯತುಂಬುವೆನು ಬಾರಮ್ಮ ಕೋಲೆ ೨೦೩

ಚರಣಕ್ಕಂದಿಗೆ ಗೆಜ್ಜೆ ಮಿನಗೋ ಪೀತಾಂಬರ
ಸಿರಿವತ್ಸಗಂಧ ತುಳಸಿಯ ಕೋಲೆ
ಸಿರಿವತ್ಸಗಂಧ ತುಳಸಿ ಕೌಸ್ತುಭಹಾರ
ಸಿರಿದೇವಿರಮಣ ಗುಡುಗರೆ ಕೋಲೆ ೨೦೪

ನೊಸಲೊಳೊಪ್ಪುವ ನಾಮ ಎಸೆವ ಕರ್ಣಕುಂಡಲ
ಮಿಸುನಿಯಂತೊಪ್ಪುವ ವಸನವು ಕೋಲೆ
ಮಿಸುನಿಯಂತೊಪ್ಪುವ ಮಕುಟ ಮೌಕ್ತಿಕಹಾರ
ವಸುದೇವ ತನಯಗೆ ಉಡುಗರೆ ಕೋಲೆ ೨೦೫

ಅನರ್ಘ್ಯವಾಗಿಹ ಅನಂತ ವಸ್ತ್ರಾಭರಣ
ಅನಂತ ಕಾಲಕ್ಕೆ ತಂದೆವು ಕೋಲೆ
ಅನಂತ ಕಾಲಕ್ಕೆ ತಂದೆವು ಲಕ್ಷ್ಮೀ ನಿಮ್ಮ
ಅನಂತ ಬಳಗಕ್ಕೆ ಕೊಡು ಬನ್ನಿ ಕೋಲೆ ೨೦೬

ಗಂಧ ಕುಂಕುಮ ಹಚ್ಚಿ ತಂದ ವೀಳ್ಯವ ಕೊಟ್ಟು
ಮಂದಹಾಸದಲ್ಲಿ ಕಳುಹುತ್ತ ಕೋಲೆ
ಮಂದಹಾಸದಲ್ಲಿ ಕಳುಹುತ್ತ ರುಗ್ಮಿಣಿ
ಬಂದಳು ಬಾಗಿಲ ಹೊರಹೊರಟು ಕೋಲೆ ೨೦೭

ಸಾಗರ ತನಯಳೆ ಪೂಗರ್ಭನ ಮಾತೆ
ನಾಗಾರಿ ಗಮನನ ಅರ್ಧಾಂಗಿ ಕೋಲೆ
ನಾಗಾರಿ ಗಮನನ ಅರ್ಧಾಂಗಿ ರುಗ್ಮಿಣಿ
ಹೋಗಿ ಬರುತ್ತೇನೆ ದಯವಿರಲಿ ಕೋಲೆ ೨೦೮

ಹಾದಿ ಹಾಡಲ್ಲಶ್ವಮೇಧಪರ್ವದ ಕಥೆ
ಸಾಧು ಸಜ್ಜನರ ಪದಧೂಳಿ ಕೋಲೆ
ಸಾಧು ಸಜ್ಜನರ ಪದಧೂಳಿ ಧರಿಸಿ
ಮೇದಿನಿಯೊಳಿದ ರಚಿಸಿದೆ ಕೋಲೆ ೨೦೯

ಜಯಗಳಾಗಲಿ ಅಪಜಯಗಳು ಪೋಗಲಿ
ಜಯದೇವಿ ರಮಣ ನೊಲಿಯಲಿ ಕೋಲೆ
ಜಯದೇವಿ ರಮಣನೊಲಿಯಲಿ ನಮ್ಮ ವಿ
ಜಯ ದಾಸಾರ್ಯರು ಸಲಹಲಿ ಕೋಲೆ ೨೧೦

ಮಂಗಳಾಗಲಿ ಅಮಂಗಳ ಪೋಗಲಿ
ರಂಗನ ಒಲುಮೆ ದೊರೆಯಲಿ ಕೋಲೆ
ರಂಗನ ಒಲುಮೆ ದೊರೆಯಲಿ ನಮ್ಮ ದುರಿ
ತಂಗಳು ನಿಲ್ಲದೆ ಓಡಲಿ ಕೋಲೆ ೨೧೧

ಶುಭಗಳಾಗಲಿ ಅಶುಭಗಳು ಓಡಲಿ
ಇಭವರದ ನೊಲುಮೆ ದೊರೆಯಲಿ ಕೋಲೆ
ಇಭವರದ ನೊಲುಮೆ ದೊರೆಯಲಿ ನಮ್ಮ ವಿಜಯ
ಪ್ರಭುಗಳ ಕೀರ್ತಿ ಮೆರೆಯಲಿ ಕೋಲೆ ೨೧೨

ಶ್ರೀಕೃಷ್ಣ ಅರ್ಜುನ ಸುಭದ್ರೆ ರುಗ್ಮಿಣಿ
ಸಾಕಾರವಾಗಿ ಸರಸವ ಕೋಲೆ
ಸಾಕಾರವಾಗಿ ಸರಸವಾಡಿದ ಕಥೆ
ಸಾಕಲಿ ನಮ್ಮ ಸರ್ವದಾ ಕೋಲೆ ೨೧೩

ಪಾರ್ಥಿವ ವತ್ಸರ ಕಾರ್ತಿಕ ಮಾಸದ
ಪಾರ್ಥ ಸಾರಥಿ ಪಕ್ಷ ಹರಿದಿನ ಕೋಲೆ
ಪಾರ್ಥ ಸಾರಥಿ ಪಕ್ಷ ಹರಿದಿನ ಗುರುವಾರ
ಪೂರ್ತಿಯಾಗಿಹುದು ಈ ಕೃತಿ ಕೋಲೆ ೨೧೩

ಪೂರ್ಣಬೋಧ ಮತಾಬ್ಧಿ ಪೂರ್ಣೇಂದುನಿಪ ಸತ್ಯ
ಪೂರ್ಣ ಗುರುಗಳ ನಿಜಶಿಷ್ಯ ಕೋಲೆ
ಪೂರ್ಣ ಗುರುಗಳ ನಿಜಶಿಷ್ಯನ ಕವನ
ಪೂರ್ಣ ಮಾಡಿಹರು ಗುರುಗಳು ಕೋಲೆ ೨೧೫

ಗುರು ವಿಜಯರಾಯರ ಕರುಣಾ ಕಟಾಕ್ಷದಿ
ಪರಮ ವೈಷ್ಣವರ ದಯದಿಂದ ಕೋಲೆ
ಪರಮ ವೈಷ್ಣವರ ದಯದಿಂದಲೀ ಕಥೆ
ಧರೆಯೊಳಗೆಲ್ಲ ಮೆರೆಯಲಿ ಕೋಲೆ ೨೧೬

ಪನ್ನಂಗಶಯನ ಸುಪರ್ಣಗಿರೀಶ ಸು
ಪರ್ಣವಾಹನ್ನ ಸುಖಪೂರ್ಣ ಕೋಲೆ
ಸು-ಪರ್ಣವಾಹನ್ನ ಸುಖಪೂರ್ಣನಾದ ಮೋ
ಹನ್ನ ವಿಠ್ಠಲ ಕರುಣಿಸು ಕೋಲೆ ೨೧೭

## ಶ್ರೀ ಲಕ್ಷ್ಮಣದಾಸಕೃತ ಫಲಸ್ತುತಿ

ವಂದಿಪೆ ಪುರಂದರ ವಿಠ್ಠಲ ದಾಸರ
ನಂದನ ವಿಜಯ ದಾಸಾರ್ಯರ ಕೋಲೆ
ನಂದನ ವಿಜಯದಾಸಾರ್ಯರ ಪ್ರೇಮಪುತ್ರ
ಗೊಂದಿಪೆ ಮೋಹನ್ನ ರಾಯಗೆ ಕೋಲೆ ೧

ಪಾಮರ ಜನರನು ಪಾವನ ಮಾಡಲು
ಪ್ರೇಮದೊಳೀಗ್ರಂಥ ರಚಿಸಿಹ ಕೋಲೆ
ಪ್ರೇಮದೊಳೀಗ್ರಂಥ ರಚಿಸಿದರರ್ಥವ ತಿಳಿಯೆ
ಕಾಮನಯ್ಯನು ತಾನೊಲಿವನು ಕೋಲೆ ೨

ಕೃಷ್ಣ ರುಗ್ಮಿಣಿ ದೇವಿ ಜಿಷ್ಣು ಸುಭದ್ರೆಯು
ಇಷ್ಟದಿ ಪ್ರೇಮಕಲಹದಿ ಕೋಲೆ
ಇಷ್ಟದಿ ಪ್ರೇಮಕಲಹವಾಡಿದ ಕಥೆ
ಇಷ್ಟಾರ್ಥ ಜನರಿಗೆ ಕೊಡುವುದು ಕೋಲೆ ೩

ಮೋಹನ್ನದಾಸರ ಪಾಂಡವ್ಯರೆಂಬೋರು
ಶ್ರೀ ಹನುಮನ್ನ ಒಲುಮೇಲಿ ಕೋಲೆ
ಶ್ರೀ ಹನುಮನ್ನ ಒಲುಮೆಯಿಂದೀ ಕೃತಿ
ಶ್ರೀಹರಿ ಚರಣಕ್ಕರ್ಪಿಸಿದರು ಕೋಲೆ ೪

ವೃದ್ಧ ಜ್ಞಾನಿಗಳು ತಲೆದೂಗುವಂದದಿ
ದಿಗ್ದೇವರೆಲ್ಲರು ನಲಿವಂತೆ ಕೋಲೆ
ದಿಗ್ದೇವರೆಲ್ಲರು ನಲಿವಂತೆ ರಚಿಸಿಹ
ಮಧ್ವವಲ್ಲಭನ ಕಿಂಕರ ಕೋಲೆ ೫

ತಾರತಮ್ಯವು ಮತ್ತೆ ವೈಕುಂಠ ವರ್ಣನೆ
ದೂರ ಯೋಚಿಸೆ ತತ್ವದರ್ಥವು ಕೋಲೆ
ದೂರ ಯೋಚಿಸೆ ತತ್ವದರ್ಥ ಪೇಳಿಹ ನಮ್ಮ
ತಾರಸಿಹ್ಮನ್ನ ಬಲಗೊಂಡು ಕೋಲೆ ೬

ಒಂಭತ್ತು ರಸದಿಂದ ತುಂಬಿಹುದೀ ಭಾಂಡ
ಸಂಭ್ರಮದಿಂದಲಿ ವೈಯುತ್ತ ಕೋಲೆ
ಸಂಭ್ರಮದಿಂದಲೆ ವೈಯುತ್ತ ಸವಿಯನ್ನು
ಉಂಬೋರಿಗಿಂಬು ವೈಕುಂಠದಿ ಕೋಲೆ ೭

ಕ್ಷೀರ ಕರೆದು ಕಾಸಿ ನವನೀತಗೊಳ್ಳದೆ
ನೀರದಿ ಪುಳಿಯ ಹಿಂಡುತ್ತ ಕೋಲೆ
ನೀರದಿ ಪುಳಿಹಿಂಡಿ ಕರೆದ ಸುರಭಿಯನ್ನು,
ದೂರಿದರಿಂದಲಿ ಕೊರತೇನು ? ಕೋಲೆ ೮

ದುಷ್ಟರು ದೂಷಿಸೆ ನಷ್ಟವೇನದರಿಂದ
ಸೃಷ್ಟೀಶನೊಪ್ಪಿಕೊಂಡಿರುತಿಹ ಕೋಲೆ
ಸೃಷ್ಟೀಶನೊಪ್ಪಿಕೊಂಡಿರುತಿಹನಚ್ಯುತ
ವಿಠ್ಠಲನೊಲುಮೆ ಇರಲಿಕ್ಕೆ ಕೋಲೆ ೯

ಕೋಲು ಹಾಡು ಸಂಪೂರ್ಣವು

ಶ್ರೀ ಕೃಷ್ಣಾರ್ಪಣಮಸ್ತು



೨ ರಾಗ ನಾಟನಾಮಕ್ರಿಯ ಆದಿತಾಳ

ಗುರುವಿನ ಧರ್ಮ ಕೋರಾಣ್ಯದ ಭಿಕ್ಷ
ಅರಿತು ನೀಡಲು ಮೋಕ್ಷ ಪ.

ಮರೆತುಬಿಟ್ಟರೆ ಕಪಾಳಮೋಕ್ಷ
ಯಮನಲ್ಲಾಹೋದು ಶಿಕ್ಷ ಅ.

ಖಂಡುಗ ಜೀವವ ಕೈಲ್ಹಿಡಕೊಂಡು
ಮಂಡೆಬಾಗಿ ನಿಮ್ಮಂಗಳದೊಳಗೆ
ಅಂಡಲೆಯಲು ಮೋರೆ ಹಿಂಡಿಕೊಂಡರೆ ಯಮ
ದಂಡನೆ ತಪ್ಪದೊ ೧

ಜಂಗಮರು ಜಗತ್ಪಾವನರು ಲಿಂಗಾಂಗಿಗಳು
ನಿಸ್ಸಂಗಿಗಳು
ಹಿಂಗದೆ ಸೀತಾಂಗನ ಭಕ್ತನ ಪದ
ಉಂಗುಟದೊಳಿದು ಅಗ್ಗಣಿ ಧರಿಸಿರೊ ೨

ಐವತ್ತಾರು ದೇಶದ ಒಳಗೆ ಇಪ್ಪತ್ತೊಂದು
ಸಾವಿರದಾನೂರು
ಕೈವಲ್ಯ ಸಾಧನ ನಿಮಗಿರಲು ಭಯ
ವೆತ್ತಣದೋ ಮೋಹನ್ನ ವಿಠ್ಠಲ ೩

---

೩ ರಾಗ ಕಾಂಬೋಧಿ ಝಂಪೆತಾಳ

ಭಿಕ್ಷವ್ಯಾತಕೆ ಪಾಲಾಕ್ಷ ನಿನಗೆ ಪ.

ಲಕ್ಷುಮಿ ಪತಿಯೆಂಬ ಸಖನಿದ್ದ ಬಳಿಕ ಅ.

ರಜತಾದ್ರಿ ಅರಮನೆಯು ಹೇಮಕೂಟವೆ ಧನುವು
ಗಜಗಮನ ಸುರನಿಕರ ಪರಿವಾರವು
ನಿಜರಾಣಿ ಅನ್ನಪೂರ್ಣೆ ಭುಜಗಪತಿ ಭೂಷಣನು
ಗಜಮುಖನೆ ಮೊದಲಾದ ಗಂಡುಮಕ್ಕಳಿರಲು ೧

ಬೇಡುವುದು ಬಿಟ್ಟು ನಿನ್ನೆತ್ತು ಯಮನಿಗೆ ಕೊಟ್ಟು
ಮಾಡಬಾರದೆ ಮುಯ್ಯ ಅವನ ಕೋಣ
ಜೋಡುಮಾಡಿಕೊಂಡು ಬಾಚಿ ಮೃದ ತ್ರಿಶೂಲ
ಬೇಡಿದ್ದು ಆಗದೆ ಬರಿದೆ ಧಾವತಿಗೊಂಬೆ ೨

ರೊಕ್ಕ ರೂಪಾಯಿಗಳು ಇಲ್ಲವೆಂಬೆಯ ಸಾಲ
*ತಕ್ಕೊಬಾರದೆ ಗೆಳೆಯ ಧನಪನಲ್ಲಿ
ಶುಕ್ರ ಒಕ್ಕಣ್ಣ ಮೋಹನ ವಿಠಲ ಇಕ್ಕಣ್ಣ
ಮುಕ್ಕಣ್ಣ ನೀನಾಗಿ ಮುಂಜಿಮಂತ್ರವು ಬಿಡದೆ

---

*ತಕ್ಕೊಬಾರದೆ ಧನಪಗೆಳೆಯನಲ್ಲೆ (ಪಾ).

೮ ರಾಗ ಆರಭಿ ಆದಿತಾಳ

ಏನೋ ಈ ವೇಷ ವೇದವ್ಯಾಸ
ಏನೋ ಈವೇಷ ಪ.

ಭಾನುಕೋಟಿ ಪ್ರಕಾಶ
ಬದರೀ ನಿವಾಸ ಅ.

ದ್ರೌಪದಿ ಕರೆಯಲವಾರೆ ವಸ್ತ್ರವನಿತ್ತೆ
ಕೌಪೀನ ಧರಿಸಿದ ಕೌತುಕವೇನಯ್ಯ ೧

ಮುತ್ತು ಮಾಣಿಕ್ಯ ನವರತ್ನ ಮಕುಟವಿರೆ
ನೆತ್ತಿಲಿ ಕೆಂಜಡೆ ಪೊತ್ತುಕೊಂಡಿಪ್ಪುದು ೨

ವರವೈಕುಂಠವ ಬಿಟ್ಟು ಮೋಹನ್ನ ವಿಠ್ಠಲ
ಧರೆಯೊಳು ಬೋರೆಯ ಮರದಡಿಲಿರುವುದು ೩

೯ ರಾಗ ಪುನ್ನಾಗತೋಡಿ ಆದಿತಾಳ

ತಾರಮ್ಮಯ್ಯ-ರಘುಕುಲರಾಮಚಂದಿರನ ಪ.
ಈರೇಳು ವರುಷವು ಮೀರಿ ಪೋಗುತಲಿದೆ

ಸೇರದನ್ನೋದಕ ಮಾರಪಿತನ ಕರೆ ಅ.

ಪರ್ಣಶಾಲೆಯಂತೆ ಅಲ್ಲಿ ಸು
ವರ್ಣದ ಮೃಗವಂತೆ
ಕನ್ಯೆ ಸೀತಾಂಗನೆ ಬಯಸಿದಳಂತೆ
ಸ್ವರ್ಣಾಂಬರ ಬೆನ್ನಟ್ಟಿ ಪೋದನಂತೆ ೧

ಲಕ್ಷ್ಮಣ ಅಲ್ಲಿಂದ - ಪೋಗಲು
ತತ್‌ಕ್ಷಣ ಖಳಬಂದ
ಲಕ್ಷ್ಮಿಯಾಕೃತಿಯ ಕೊಂಡುಪೋಗೆ ಕಮ
ಲೇಕ್ಷಣ ಹೊರಟನು ಆಕ್ಷಣವಲ್ಲಿಗೆ ೨

ಅಂಜನೆ ಸುತಬಂದ-ಹರಿಪದ
ಕಂಜಕೆರಗಿನಿಂದ
ಕುಂಜರ ಗಮನೆಯು ಕುರುಹ ಪೇಳಿನುತ, ನಿ
ರಂಜನ ಮೂರ್ತಿಗೆ ಅಂಜದೆ ಬೆಸೆಸಿದ ೩

ಶರಧಿಯನೆ ಹಾರಿ-ಉಂಗುರ
ಧರಣಿಸುತೆಗೆ ತೋರಿ
ಸುರಪುರ ಗೋಪುರ ಉರುಹಿ ಚೂಡಾಮಣಿ
ಹರಿಗೆ ಸಮರ್ಪಿಸಿ ಹರುಷದಲಿಹನಂತೆ ೪

ಸೇತುವೆಯನು ಕಟ್ಟಿ-ಖಳಕುಲ
ನಾಥನ ತರಿದೊಟ್ಟಿ
ಸೀತೆ ಸಹಿತ ಮೋಹನ್ನ ವಿಠಲ ಜಗ
ನ್ನಾಥ ಹೊರಟನಂತೆ ಕಾಂತೆ ೫

೬ ರಾಗ ರೇಗುಪ್ತಿ ಝಂಪೆತಾಳ

ಶ್ರೀಮಧ್ವ ಚಿತ್ತಮಂದಿರನೆ ನಿನ್ನಯ ಚರಣ
ತಾಮರಸ ನೆರೆನಂಬಿದೆ ಪ

ಕಾಮ ಕ್ರೋಧಗಳನ್ನು ಕಡಿಮು ನಿನ್ನಯ ದಿವ್ಯ
ನಾಮಾಮೃತವನುಣಿಸೋ ಸ್ವಾಮಿ ಅ

ಮಾರನ್ನ ಉಪಟಳಕ್ಕಾರದಲೆ ನಾ ಬಲು
ಘೋರಬುದ್ಧಿಯನು ಮಾಡಿ
ಬಾರಿ ಬಾರಿಗೆ ಮನದಿ ಬಯಸಿ ಪರನಾರಿಯರ
ಮೋರೆ ಬಣ್ಣವನೆ ನೋಡಿ
ಆರು ಇಲ್ಲದ ವೇಳೆ ಕಣ್ಣುಸನ್ನೆಯುಲವಳ
ಕೋರಿದ್ದು ಇತ್ತು ಕೂಡಿ
ವಾರಿಜನಾಭ ನಿನ್ನಾರಾಧನೆಯ ಮರೆದು
ಧಾರುಣಿಗೆ ಭಾರವಾಗಿ ಅಶನ ಶತ್ರುವಾದೆ

ಉಪರಾಗ ಮೊದಲಾದ ದಶಮಿ ದ್ವಾದಶಿ ದಿನದಿ
ಉಪೇಕ್ಷೆಯನು ಮಾಡಿ ಜರಿದೆ
ಉಪಕಾರವೆಂದು ನಿಜವೃತ್ತಿ ಪೇಳದರೆನಗೆ
ಅಪಕಾರವೆಂದು ತಿಳಿದೆ
ನಿಪುಣ ನೆನಿಸುವೆನೆಂದು ಅಜ್ಞಾನಿಗಳ ಮುಂದೆ
ತಪವೃದ್ಧರನ್ನು ಜರೆದೆ
ಸ್ವಪನದೊಳಗಾದರೂ ವೈರಾಗ್ಯ ಬಯಸದಲೆ
ಕಪಟ ಮನುಜರೊಳಾಡಿ ನಿನ್ನ ಮರೆದೆನೊ ಸ್ವಾಮಿ ೨

ಭೂಸುರರು ಚಂಡಾಲ ಜಾತಿಯೆನ್ನದೆ ಬಲು
ಹೇಸಿಕಿಲ್ಲದಲೆ ತಿರಿವೆ
ಆಶಾಪಾಶಕೆ ಸಿಲುಕಿ ಕಂಡ ಕಂಡಲಿ ತಿಂದು
ದೋಷರಾಶಿಯನು ತರುವೆ
ಆ ಸತೀಸುತರ ಸಲಹುವೆನೆಂದು ಪರಿಪರಿ
ವೇಷವನು ಧರಿಸಿ ಮೆರೆವೆ
ವಾಸುಕೀ ಶಯನ ವಸುದೇವ ತನಯನೆ ನಿನ್ನ
ದಾಸನೆನಿಸದಲೆ ಅಪಹಾಸ ಮಾನವನಾದೆ ೩

ಹರಿದಾಸರಲ್ಲಿ ಒಂದರಘಳಿಗೆ ಕುಳಿತರೆ
ಶಿರವ್ಯಾಧಿಯೆಂದ್ಹೇಳುವೆ
ದುರುಳ ದುರ್ವಾರ್ತೆಗಳ ಪೇಳಲು ಹಸಿತೃಷೆಯ
ಮರೆದು ಆಲಿಸಿ ಕೇಳುವೆ
ತರುಣಿ ತರಳರು ಎನ್ನ ಪರಿಪರಿ ಬೈದರೆ
ಪರಮ ಹರುಷವ ತಾಳುವೆ
ಗುರುಹಿರಿಯರೊಂದುತ್ತರವನಾಡಲು ಕೇಳಿ
ಧರಿಸಲಾರದಲೆ ಮತ್ಸರಿಸುವೆನೊ ಅವರೊಳಗೆ ೪

ನಾ ಮಾಡಿದಪರಾಧಗಳನೆಣಿಸಿ ಬರೆವುದಕೆ
ಭೂಮಂಡಲವೆ ನೆರೆಸಾಲದೊ
ಸೀಮೆಯೊಳಗುಳ್ಳ ದುರ್ಮತಿಯೆಲ್ಲ ಕೂಡಲು
ಈ ಮತಿಗೆ ಆದು ಪೋಲದೋ
ಹೋಮ ಜಪತಪವು ಇನ್ನೆಷ್ಟು ಮಾಡಲು ಪಾಪ
ಸ್ತೋಮ ಎಂದಿಗೂ ವಾಲದೊ
ಸಾಮಜವರದ ಮೋಹನ್ನ ವಿಠ್ಠಲ ನಿನ್ನ
ನಾಮವೊಂದಲ್ಲದೆ ಪ್ರಾಯಶ್ಚಿತ್ತವ ಕಾಣೆ ೫

೭ ರಾಗ ಕಾಂಬೋಧಿ ಝಂಪೆತಾಳ

ಡಂಭಕದ ಭಕುತಿಯನು ಬಿಡುಕಂಡ್ಯ ಮನವೆ ಪ.

ಅಂಬುಜಾಕ್ಷನು ಒಲಿಯ ಅನಂತ ಕಾಲಕ್ಕು ಅ.

ಬಹಿರ ಅಂಗಡಿ ಹೂಡಿ ಜನರ ವಂಚಿಸಿದರೆ
ಅಹಿಕ ಫಲವಲ್ಲದೆ ಮೋಕ್ಷವುಂಟೆ ?
ವಿಹಿತಾವಿಹಿತವ ತಿಳಿದು ಸತ್ಕರ್ಮ ಕಿಂಚಿತು ಮಾಡೆ
ದಹಿಸುವುದು ಅಘರಾಶಿ ಅಹಿಶಾಯಿ ಒಲಿವ ೧

ವರವೈಷ್ಣವರು ಬಂದು ನಿಲಲು ವಂದಿಸದಲೆ
ಹರಿಪೂಜೆ ಮಾಳ್ಪೆನೆಂದು ಕುಳಿತುಕೊಂಬೆ
ಅರಿಯದ ಊರೊಳಗೆ ಅಗಸರ ಮಾಳಿಯೇ
ಹಿರಿಯ ಮುತ್ತೈದೆಯು ಎಂದು ಕರೆಸುವಂತೆ ೨

ಜಪವ ಮಾಡುವೆನೆಂದು ಮುಸುಕನಿಟ್ಟು ಕುಳಿತು
ತಪಿಸುವೆ ಒಳಗೆ ನೀ ಧನದಾಸೆಯಿಂದ
ಕುಪಿತ ಬುದ್ಧಿಯ ಬಿಟ್ಟು ಮೋಹನ್ನ ವಿಠ್ಠಲನ
ಗುಪಿತ ಮಾರ್ಗದಿ ಭಜಿಸಿ ಸುಪಥವನುಸರಿಸೆ ೩

೮ ರಾಗ ಮೋಹನ ಝಂಪೆತಾಳ.

ನಿನ್ನ ಪಾದವನ್ನಂಬಿ ಅನ್ಯರಾಶ್ರಯವೇಕೆ
ಚಿನ್ನ ಗುರು ವಿಜಯರಾಯ ಪ.

ಇನ್ನೇನು ಇನ್ನೇನು ಎನ್ನ ಕುಲಕೋಟಿ ಪಾ
ವನ್ನವಾದುದು ನಿಶ್ಚಯ, ಸ್ವಾಮಿ ಅ.

ಪಂಚ ಮಹಪಾತಕರೊಳಗೆ ಮೂರನೆ ಕಕ್ಷಿ
ಕಾಂಚಕ ದ್ರೋಹಿ ನಾನು, ಎನ್ನ
ಮುಂಚೆ ಬಂದಾಗ ಕೈಪಿಡಿದೆ, ಪ್ರ
ಪಂಚವ ಬಿಡುಯೆಂದು ನುಡಿದೆ, ಒಲಿದು
ಸಂಚಿತಾಗಾಮಿಯೆಲ್ಲ ತೊಡೆದೆ, ಎನ್ನ
ಕಂಚುಕಟ್ಟಳೆ ಕಲ್ಲೊತ್ತು ಮೋಣ ರುಪ್ಪಿಗೆ
ಪಂಚೇರು ಮಾಡಿ ನಡೆಹೇ ಬಿಡದೆ ೧

ವ್ಯಾಸರಾಯರ ಗುಹೆಯೊಳು ಕುಳಿತು ನವಸ
ನ್ಯಾಸಿಗಳ ಸಮುಕ್ಷಮದಲ್ಲಿ, ಎನ್ನ
ದಾಸನಾಗೆನುತ ನೀ ಪೇಳ್ದೆ, ಒಲಿದು
ದೋಷಾಂಕುರವನೆಲ್ಲ ಸೀಳ್ದೆ, ಎನ್ನ
ವಾಸಿಪಂಥವನೆಲ್ಲ ಕಳೆದ ನಮ್ಮ
ಶ್ರೀಶ ಸರ್ವೋತ್ತಮನಹುದೆಂದು ಒರೆದು ಸಂ
ತೋಷದಿಂದೆನ್ನ ಪೊರೆದೆ ಸ್ವಾಮಿ ೨

ರಾಜಾಧಿರಾಜರು ಬಂದು ಪ್ರಾರ್ಥಿಸೆ ಗುರು
ರಾಜ ನೀನವರಲ್ಲಿ ಬರುವೆ, ದಿವ್ಯ
ಭೋಜನಮಾಡಿ ಫಲಗರೆವೆ, ಇನ್ನು
ರಾಜಧಾನಿಗೆ ಪೋಗಿ ಬರುವೆ, ಉಡು
ರಾಜನಂದದಿ ನಿತ್ಯಮೆರೆವೆ, ಎನ್ನ
ಪೂಜಾಫಲವೆಂದು ಆವಾಗ ನಿನ್ನ ಪದ
ರಾಜೀವ ಧೇನಿಸುತಿಹೆನೊ ಸ್ವಾಮಿ

ಪುಸಿಯು ಈ ಜಗವೆಲ್ಲ-ದೈವವು ತಾನೆಂಬ
ಅಸಮ ವೇದವಪೌರುಷೆಂಬ, ಮಾಯಿ
ಭಸುಮ ಧಾರಿಯನ್ನು ಕರೆದೆ, ಅವನ
ಅಸುರಭಾವವನೆಲ್ಲ ಮುರಿದೆ, ಸಿರಿ
ಬಿಸಜಾಕ್ಷ ಪರನೆಂದು ಒರೆದೆ, ಅವಗೆ
ಎಸೆವ ದ್ವಾದಶನಾಮ ಪಂಚ ಮುದ್ರೆಯನಿಡಿಸಿ
ನಸುನಗುತಲವನ ಪೊರೆದೆ ಸ್ವಾಮಿ ೪

ಎನ್ನನೊಬ್ಬನ ಪಾಲಿಸಿದ್ದು ಬಲು ಗುರುತಲ್ಲ
ಚೆನ್ನಿವರದನ ಸಂತತಿಯೆಲ್ಲ, ಇನ್ನು
ನಿನ್ನ ಪಾದಕೆ ಬಿಟ್ಟದ್ದಲ್ಲ, ವಾಕು
ಅನ್ಯಥಾ ಮಾಳ್ಪುದು ಸಲ್ಲ, ಮೋ
ಹನ್ನ ವಿಠ್ಠಲ ಇದನು ಬಲ್ಲ, ಅಯ್ಯ
ಪನ್ನಂಗಶಯನ ಪ್ರಸನ್ನನಾದುದಕಿದು
ಎನ್ನ ಮನೋರಥ ಸಿದ್ಧಿಯೊ ಸ್ವಾಮಿ ೫

೯ ರಾಗ ತೋಡಿ ಝಂಪೆತಾಳ

ಏನುಮಾಡಿದರೇನು ಜ್ಞಾನವಿಲ್ಲದಲೆ ಪ.
ಆನೆಗೆ ಮಜ್ಜನವನು ಮಾಡಿಸಿದ ತೆರದಿ ಅ.

ವೇದವೋದಿದರೇನು ಶಾಸ್ತ್ರ ಪಠಿಸಿದರೇನು
ವಾದಿಸಿದರೇನು ತರ್ಕವನು ಮಾಡಿ
ಪಾದದಿ ಗಂಗೆಯನು ಪಡೆದ ನಾರಾಯಣನೆ
ಆದಿಯೆನ್ನುತ ಪಂಚ ಭೇದವನು ಅರಿಯದಿರೆ ೧

ಯಾತ್ರೆ ಮಾಡಿದರೇನು ತೀರ್ಥ ಮಿಂದರೇನು
ಪಾತ್ರನೆನಿಸಿದರೇನು ಡಂಭದಿಂದ
ಗಾತ್ರವ ಬಳಲಿಸಿ ಯಜ್ಞಮಾಡಿ ಅಗ್ನಿ
ಹೋತ್ರವಿಟ್ಟರೇನು ಹರಿಮಹಿಮೆ ತಿಳಿಯದಿರೆ ೨

ಹದ್ದಿನಂದದಿ ಬಹುಕಾಲ ಬಾಳಿದರೇನು
ಸದ್ಧರ್ಮ ವೃತ್ತಿಯನು ಜರಿದು ನಿತ್ಯ
ಮಧ್ವ ವಲ್ಲಭ ನಮ್ಮ ಮೋಹನ್ನ ವಿಠ್ಠಲನ
ಪದ್ಮ ಪಾದವ ನಿತ್ಯವೊಂದಿಕೊಂಡಿರದೆ ೩

೧೦ ರಾಗ ಸೌರಾಷ್ಟ್ರ ಅಟತಾಳ

ಶ್ರೀನಾಥನ ನಾಮಾಮೃತ ರುಚಿಯೊಲ್ಲ
ಪರಮ ಭಕುತಗಲ್ಲದೆ ಪ.

ಹೀನ ಮನುಜರು ಕೇಳಿ, ಹಿರ‍್ರನೆ ಹಿಗ್ಗಿ
ಆನಂದ ಪಡಬಲ್ಲನೆ ಅ.

ಕ್ಷೀರವಾರಿಯ ಕೂಟ ಮರಾಳ ತಿಳಿವಂತೆ
ನೀರು ಕೋಳಿಯು ಬಲ್ಲುದೆ
ಸಾರಮೇಯನ ಬಾಲಲಳಿಗೆಯೊಳಿಟ್ಟರೆ
ನೇರವಾಗಬಲ್ಲುದೆ
ದಾರು ಪ್ರತಿಮೆಗೆ ಸೀರೆಯನುಡಿಸಲು
ನಾರಿಯಾಗಬಲ್ಲುದೆ
ಭಾರತಿ ಪತಿಪಾದವರಿಯದ ಮನುಜನು
ನಾರಾಯಣನ ಬಲ್ಲನೆ ೧

ಉದರಕ್ಕೆ ಗ್ರಾಸವ ನಡೆಸದ ಮನುಜನು
ಮದುವೆ ಮಾಡಲಿ ಬಲ್ಲನೆ
ಸದನಕ್ಕೆ ಬಂದರೆ ಕದನವ ತೆಗೆವವ
ಬುಧರು ಎಂಬುದ ಬಲ್ಲನೆ
ವಿಧಿಯಂತೆ ಮಸೆದು ಮತ್ಸರಿಸುವವನು ತಾನು
ಹದುಳ ಹಾರೈಸುವನೆ
ಮದವೆಗ್ಗಳವಾಗಿ ತಿರುಗುವವನು ಹರಿ
ಪದಗಳರ್ಚಿಸಬಲ್ಲನೆ ೨

ಕನ್ನಡಿಯೊಳು ರೂಪು ಹೊಳೆದಂತೆ ಹಂಚಿನೊಳ್
ಇನ್ನು ಕಾಣಿಸಬಲ್ಲುದೆ
ಕಣ್ಣಿಲ್ಲದವನಿಗೆ ಚಿನ್ನವ ತೋರಲು
ಬಣ್ಣ ಹೇಳಬಲ್ಲನೆ
ಹೆಣ್ಣಿನ ಮೇಲಿನ ವ್ಯಾಮೋಹ ಬಿಡದವ
ಸನ್ಯಾಸಿಯಾಗುವನೆ
ಅನ್ಯ ದೈವಂಗಳ ಭಜಿಸುವ ನರಗೆ ಮೋ
ಹನ್ನ ವಿಠ್ಠಲ ಒಲಿವನೆ ೩

೧೧ ರಾಗ ಆರಭಿ ಆದಿತಾಳ

ಮಾರುತನ್ನ ಜಾಯೆ, ಮರೆಯ ಹೊಕ್ಕೆನು ತಾಯೆ
ಮಾರಾಂತಕ ಶಂಬರಾರಿ ಬಿದುರಧರ
ತಾರೇಶ ರವಿವಿನುತೇ ಅಮ್ಮಯ್ಯ ಪ

ಭ್ರಮರ ಕುಂತಳೆ ಜಾಣೆ ಅಮರ ವಂದಿತ ಚರಣೆ
ಸುಮನಸೇಶನ ಪಾದ ಕಮಲ ಪೂಜಿಪುದಕೆ
ವಿಮಲ ಮತಿಯ ನೀಯೆ ಅಮ್ಮಯ್ಯ ೧

ಕೃತೀ ದೇವಿಯರಲ್ಲಿ ಸುತೆಯಾಗ ಜನಿಸಿದೆ
ಸತತ ಎನ್ನಯ ದುರ್ಮತಿ ಖಂಡಿಸಿ ಸು
ಮತಿವಂತನ ಮಾಡೆ ಅಮ್ಮಯ್ಯ ೨

ಎರಡೇಳು ಭುವನ ಜಠರದೊಳಗಿಂಬಿಟ್ಟ
ಪರಿಪೂರ್ಣ ಕಾಮ ಶ್ರೀ ಮೋಹನ್ನ ವಿಠಲನ
ಚರಣ ಭಕುತಿಯ ನೀಯೆ ಅಮ್ಮಯ್ಯ ೩

೧೨ ರಾಗ ದೇಶಿ ತಾಳ

ಸಂಜೀವನ ಗಿರಿಧರ ಪಾಹಿಮಾಂ ಪ.

ಚಕ್ರತೀರ್ಥನಿವಾಸ ಶಕ್ರಾದ್ಯಮರಾಧೀಶ
ವಕ್ರಾನನಮೂರುತಿ ಪಾಹಿಮಾಂ ೧

ಮಂತ್ರಮೂಲಸ್ಥಿತ ಕಂತುಪಿತನ ದೂತ
ಯಂತ್ರೋದ್ಧಾರಕ ಪಾಹಿಮಾಂ ೨

ಮೋಹನ ವಿಠಲದಾಸ ಪೋಷಕ ಮಾಯಾ
ಮೋಹಕಭಂಜಕ ಪಾಹಿಮಾಂ ೩

೧೩ ರಾಗ ಸುರುಟಿ ಆದಿತಾಳ

ತಂದೆ ವಿಜಯರಾಯ ವೇಳೆಗೆ
ಬಂದೆ ವಿಜಯರಾಯ ಪ.

ಹಿಂದೇಸುಜನ್ಮವೊ ಮುಂದೇಸುಜನ್ಮವೊ
ಒಂದು ತಿಳಿಯದು ಎಂದೆಂದಿಗೂ ಎನ್ನ ಅ.

ಸೂರ್ಯನ ಸುತನಂತೆ ಅಲ್ಲಿ ಮಹಾ
ಶೌರ್ಯ ದೂತರಂತೆ
ಕಾರ್ಯಾಕಾರ್ಯವ ತಿಳಿಯದೆ ನಿನ್ನ ಪರಿ
ಚಾರ್ಯನೆಳೆಯುತಿರೆ ಭಾರ್ಯಳು ಮೊರೆಯಿಡೆ ೧

ಆದೆ ಧೈರ್ಯವೆ ನೋಡಿ, ಸುದತಿ ತನ್ನ
ಹೃದಯ ಬದ್ಧಮಾಡಿ
ಮಧುಸೂದನನೆ ಮುದತೀರಥರೆ
ಒದರಿದಳೊದರಿದಳ್ ವಿಜಯರಾಯರೆಂದು ೨

ಕರಗಳನೆ ಕಟ್ಟಿ ಎಳೆಯುತಿರೆ
ಧರೆಗಳನೆ ಮುಟ್ಟಿ
ಸಿರಿಮೋಹನ್ನ ವಿಠ್ಠಲನ ಪದವತೋರಿ
ಧರೆಗೆ ತಂದುಬಿಟ್ಟಿ ಕರುಣಾಳುವೆ ಎನ್ನ ೩

೧೪ ರಾಗ ಅಠಾಣ ಅಟತಾಳ

ಬೇಡವೋ ಬ್ರಾಹ್ಮಣದ್ರೋಹ ಬೇಡವೊ ಪ.

ಮಾಡಬೇಡವೊ ನಿನಗೆ ಕೇಡು ತಪ್ಪದು ಕೊನೆಗೆ
ನಾಡೊಳಗಪಕೀರ್ತಿ ಬೇಡಿಕೊಂಬೆನು ಕೆಡ ಅ.

ಹೊತ್ತಿದ್ದಿ ಬಹು ಭಾರ ನೀನು, ಅಂಥ
ಅತ್ಯಂತವಲ್ಲವಿದೇನು, ನಿನ್ನ
ಚಿತ್ತ ದೃಢಮಾಡು ಉತ್ತಮ ವಿಪ್ರರ
ವೃತ್ತಿಯಸೆಳೆದು ಉನ್ಮತ್ತನಾಗಿ ಕೆಡ ೧

ಸೂಸುವ ನದಿಯೊಳು ಬಿದ್ದು, ಇನ್ನು
ಈಸಲಾರದೆ ಮುಳುಗೆದ್ದು, ಅಂಜಿ
ಈಸುಬುರುಡೆ ಬಿಟ್ಟು ಬೀಸೋ ಕಲ್ಲನು ಕಟ್ಟಿ
ಈಸುವ ತೆರನಂತೆ ಭೂಸುರ ದ್ರವ್ಯವು ೨

ನೃಗರಾಯನೆಂಬ ಭೂಪತಿಯು, ವಿಪ್ರ
ರಿಗೆ ಗೋದಾನವನಿತ್ತ ಬಗೆಯ ಕೇಳಿ
ಅಗಲಿ ತಮ್ಮೊಳು ತಾವೆ ಜಗಳಪುಟ್ಟಿ ಆ ನೃ
ಪಗೆ ತೊಣ್ಣೆಯಾಗೆಂದ್ದುಗರಣವ ಕೇಳು ೩

ರಾವಣನೆಂಬುವ ದುಷ್ಟ, ಅವ
ದೇವತೆಗಳ ಸೆರೆಯಿಟ್ಟ, ಆಗ
ದೇವನರಸಿ ಸೀತಾದೇವಿಯು ನೆಪದಿಂದ
ಜೀವಕ್ಕೆ ಮುನಿದು ದೇವತೆಗಳ ಕಾಯ್ದನೊ ೪

ಇನ್ನೆಷ್ಟು ಹೇಳಲೊ ಸಾಕ್ಷಿ, ಬ್ರಾಹ್ಮ
ರನ್ನವ ತೆಗೆದರೆ ಶಿಕ್ಷೆ, ಮೋ
ಹನ್ನ ವಿಠ್ಠಲರಾಯ ತನ್ನಯ ಭಜಕರ
ಬೆನ್ನ ಬಿಡದಲೆ ಕಾಯ್ವ ಇನ್ನಾದರು ಕೆಡ ೪

## ೧೫ ಸುಳಾದಿ

### ಧ್ರುವತಾಳ

ಹರಿಯೆ ಸರ್ವೋತ್ತಮ ಸಿರಿಯು ಆತನ ರಾಣಿ
ಸರಸಿಜೋದ್ಭವ ಮಾರುತ ಪುತ್ರರಯ್ಯ
ಸರಸ್ವತಿ ಭಾರತಿ ಗರುಡ ಶೇಷ ರುದ್ರ
ಹರಿಯ ರಾಣಿಯರು ನಾಲ್ಕೆರಡುಮಂದಿ ಸೌ
ಪರಣಿ ವಾರುಣಿ ಗಿರಿಜಾ ಸುರಪತಿ ಕಾಮಾದ್ಯರ
ತಾರತಮ್ಯ ಜ್ಞಾನದಿಂದ ತಿಳಿಯಬೇಕು
ಸುರನದಿ ಪಿತ ನಮ್ಮ ಮೋಹನ್ನ ವಿಠ್ಠಲ
ಶರಣನೆನಿಸಿದವಗೆ ಇನ್ನು ಸರಿಯು ಕಾಣೆ ೧

### ಮಠ್ಯತಾಳ

ಜೀವ ಜೀವಕೆ ಭೇದ ಜಡಕೆ ಜಡಕೆ ಭೇದ
ಜೀವ ಜಡಕೆ ಭೇದ ಹರಿಗೆ ಜಡಕೆ ಭೇದ
ಜೀವ ಈಶಗೆ ಭೇದ ದೇವ ನಾರಾಯಣನ
ಭಾವ ಕ್ರಿಯೆಗಳಿಗೆ ಅಭೇದವನ್ನು ತಿಳಿದು
ಶ್ರೀ ವಲ್ಲಭ ನಮ್ಮ ಮೋಹನ್ನ ವಿಠ್ಠಲನ
ಪಾವನ್ನ ಚರಣ ನಾಮ ತೀವ್ರದಲಿ ಭಜಿಸು ೨

ತ್ರಿಪುಟತಾಳ

ಹರಿಯು ತನಗೆ ಬೇಕಾದವನ ಮನಸು
ಎರಗಲೀಸನು ಅನ್ಯ ಸತಿಯರಲ್ಲಿ
ಎರಗಿಸಿದರೆ ಬೇಗ ತಿರುಗಿಸುವನಯ್ಯ
ತಿರುಗಿಸದಿದ್ದರೆ ಬೆರೆಯಲೀಸ
ಬೆರೆದರೆ ಬೆರೆಯಲಿ ರತಿಯ ಪುಟ್ಟಲೀಸ
ರತಿಪುಟ್ಟಿದರೆ ಏನು ಕಾಕು ಮಾಡಲೀಸನಯ್ಯ
ಕರುಣಾಸಾಗರ ನಮ್ಮ ಮೋಹನ್ನ ವಿಠ್ಠಲಗಿನ್ನು
ಸರಿಗಾಣೆ ರಕ್ಷಿಸುವ ೩

ಅಟತಾಳ

ಮಾರುತ ಮತವಪೊಂದಿ ಹರಿಗೆ ಪರನೆಂದು
ಗುರುಹಿರಿಯರ ಚರಣಕ್ಕೆರಗು ಅವಾಗಲು
ಹರಿಕಥಾಮೃತವ ಕರ್ನದಿಂದಲಿ ಕೇಳು
ಹರಿ ನಿರ್ಮಾಲ್ಯವ ಶಿರದಲ್ಲಿ ಧರಿಸುತಿರು
ಹರಿನೈವೇದ್ಯವ ಹರುಷದಿ ಭುಂಜಿಸು
ಹರದಾಸರ ಕೂಡೆ ತಿರುಗು ಊಳಿಗನಂತೆ
ಹರಿಯವತಾರ ಸಿರಿ ಮೋಹನ್ನ ವಿಠ್ಠಲ
ಹರಿಯೇ ತ್ರಿಭುವನ ಧೊರೆಯೆಂದು ತಿಳಿಯೊ ೪

ಆದಿತಾಳ

ತನಗೆ ಬೇಕಾದವನು ಉನ್ನತ ಪಾಪವ ಮಾಡೆ
ದಾನವರಿಗೆ ಕೊಡಿಸಿ ಪುಣ್ಯ ಭಕ್ತರಿಗೀವ
ಘನ್ನ ಮಹಿಮ ಲಕುಮಿಯನ್ನು ಬಿಟ್ಟರೇನು
ಪ್ರ-ಪನ್ನರ ಬಿಡನೆಂಬ ಚಿನ್ಮಯ ಮೂರುತಿ
ಪನ್ನಗಾದ್ರಿನಿಲಯ, ಮೋಹನ್ನ ವಿಠ್ಠಲನ್ನ
ಸನ್ನುತಿಸುವನಿಗೆ ಇನ್ನು ಸರಿಯು ಕಾಣೆ

*ಜೊತೆ

---

*ಸದ್ಯಃ ದೊರೆತಿಲ್ಲ.

## ೧೬ ಸುಳಾದಿ

ಧ್ರುವತಾಳ

ಹರಿದಾಸನು ನಾನಲ್ಲ ಹರಿಭಕುತಿ ಎನಗಿಲ್ಲ
ಧರೆಯೊಳು ಒಂದು ವೇಷವ ಧರಿಸಿ ತಿರುಗುವೆನು ನಾನು
ತರುಣಿ ಮಕ್ಕಳು ಸಹೋದರ ಮೊದಲಾದವರ
ಪೊರೆವೆನೆನುತ ಡಂಭ ವಿರಚಿಸಿ ಶರಣನೆಂತೆಂದು
ಕರೆಸಿಕೊಂಬೆನೊ ಬಹಿರದಲ್ಲಿ ಅನ್ಯರಿಂದಲಿ
ಸಿರಿಪತಿ ನಿನ್ನ ಪಾದ ಸ್ಮರಿಸದಲೆ
ಪರಮ ದಯಾಳು ಮೋಹನ್ನ ವಿಠ್ಠಲರೇಯ
ಕರಣ ಶುದ್ಧನಾಗದೆ ತಿರುಗಿದೆ ಪೊಟ್ಟೆಗಾಗಿ ೧

ಮಠ್ಯತಾಳ

ದೇಶದೇಶಕೆ ಧನದ ಆಸೆಗಾಗಿ ಪೋಗಿ
ಕಾಶಿಗ್ಹೋಗುವೆನೆಂದು ಕಾಸು ಹಣವ ತಂದು
ಈ ಸಂಸಾರಕ್ಕೆ ನಾ ಸಮರ್ಪಿಸಿ
ತೋಷಪಡುವೆ ದುರಿತರಾಶಿಯೆಂದರಿಯದಲೆ
ಭೂಸುರರು ಎನ್ನಾವಾಸದಲ್ಲಿಗೆ ಬರಲು
ಗ್ರಾಸವೀಯದೆ ಅಪಹಾಸಮಾಡುವೆ ನಾನು
ದೋಷವರ್ಜಿತ ನಮ್ಮ ಮೋಹನ್ನ ವಿಠ್ಠಲ
ಘಾಸಿಯಾದೆನೊ ಯಮನಪಾಶಕ್ಕೆ ಗುರಿಯಾಗಿ ೨

ತ್ರಿಪುಟತಾಳ

ವಿತ್ತವಿದ್ದವನ ಮನೆಯಲ್ಲಿ ಪೋಗಿ ಕುಳಿತು ಬಲು
ಉತ್ತಮನೆಂದವನ ಸ್ತೋತ್ರವಮಾಡಿ
ಹತ್ತೆಂಟು ಪುಸಿವಾರ್ತೆ ಪೇಳೆ ಅವನು ಈ
ಹೊತ್ತು ಬನ್ನಿರಿಯೆನ್ನೆ ಹರುಷದಿಂದ

ಹತ್ತೆಯದು ದೇವತಾರ್ಚನೆಯ ಸಾಮಗ್ರಿಯ
ತತ್ಥಳಿಸುವಂತೆ ವಿರಚಿಸುವೆ
ಸುತ್ತ ಧೂಪದೀಪವೆತ್ತಿ ನೈವೇದ್ಯವ
ಹತ್ತಿಲಿರಿಸಿಕೊಂಡು ಮುಸುಕಿಟ್ಟು
ಚಿತ್ತ ಶುದ್ಧವಿಲ್ಲದಲೆ ಬಹಿರದಲ್ಲಿ ಕರ
ವೆತ್ತಿ ಪಿಟಿಪಿಟಿಯೆಂದು ತುತಿಸುವೆನೊ
ಮತ್ತೇನು ಮಂತ್ರ ತಂತ್ರ ಬಾರದೆನ್ನ
ಹತ್ತಿಲಿ ಸೇರಲೀಸೆನೊ ಸ್ತೋತ್ರವರ
ಎತ್ತನೋಡಲು ಎನ್ನ ಹತ್ತಿಲಿ ಹೊದ್ದಿದವರು
ಮುತ್ತಿಕೊಂಡು ಕಾಗೆ ಬಳಗದಂತೆ
ಚಿತ್ತಜನಯ್ಯ ಮೋಹನ್ನ ವಿಠ್ಠಲ ನಿನ್ನ
ಭೃತ್ಯನೆನಿಸಿ ಸ್ವಸ್ಥ ಚಿತ್ತದಿಂದಿರದ್ಹೋದೆ ೩

ಅಟತಾಳ

ಕಾಮ ಕ್ರೋಧ ಲೋಭ ಮದ ಮತ್ಸರಂಗಳು
ರೋಮ ರೋಮ ಕೂಪದೊಳು ತುಂಬಿಕೊಂಡು
ಭೂಮಿಸುರ ದೇಹ ಬಂದಿಹದೆಂತೆಂಬ
ಈ ಮಹಾಗರ್ವದಿಂದಾಡುವೆ ಸುಜನರ
ಶ್ರೀ ಮನೋಹರ ನಿನ್ನ ತಾಮರಸಾಂಘ್ರಿಯನಿ
ಷ್ಕಾಮದಿಂದಲಿ ಭಜಿಸಿ ಮರೆಪೋಗಲಿಲ್ಲ
ಭೂಮಿ ಭಾರಕನಾಗಿ ತನುವ ಪೊರೆದೆನ್ಹೈಯ
ನಾಮಾಮೃತವನ್ನು ಪ್ರೇಮದಿ ಸವಿಯದೆ
ಸಾಮಜವರದ ಮೋಹನ್ನ ವಿಠ್ಠಲ ಅ
ನಾಮಧೇಯನಾದೆ ಪಾಮರರೊಡಗೂಡಿ ೪

ಆದಿತಾಳ

ಅನ್ಯರ ಪದಾರ್ಥ ತಂದು ನಿನ್ನ ಮುಂದೆ ರಚಿಸಿದರೆ
ಎನ್ನಗೇನು ಬರುವುದೊ ಬಲು ಪುಣ್ಯವೇನೊ ಅದರಿಂದ

ತನ್ನ ಕರದಿಂದಲಿ ಉದಕವನ್ನು ತಂದು ತುಲಸಿಯಿಂದ
ನಿನ್ನ ಪೂಜೆ ಮಾಡಲು ಪ್ರಸನ್ನನಾಗಿ ಪಾಲಿಸುವಿ
ಮುನ್ನೆ ಒಬ್ಬ ಕುಚೇಲಂಗೆ ಮನ್ನಿಸಿ ಪದವಿಯನಿತ್ತಿ
ನಿನ್ನ ಮಹಿಮೆ ಎಣಿಪರಾರೋ ಘನ್ನಮಹಿಮ ಮೋ
ಹನ್ನ ವಿಠ್ಠಲರೇಯ ಅನ್ಯರಲ್ಲಿ ಪೋಗಿ, ಪಾಪಕೊಂಡು
ಬರುವೆನೊ ೫

*ಜೊತೆ

೧೭ ರಾಗ ಭೈರವಿ ಅಟತಾಳ

ಜಯಮಂಗಳಂ ನಿತ್ಯ ಶುಭಮಂಗಳಂ ಪ.

ಹಾರುವಗೆ ಮರದ ಮೇಲೇರುವಗೆ ಮುದ್ರಿಕೆಯ
ತೋರುವಗೆ ವನಕಿತ್ತು ತೂರುವಗೆ
ಸಾರುವಗೆ ಆರ್ಭಟಿಸಿ ಚೀರುವಗೆ ರಕ್ಕಸರ
ಹೀರುವಗೆ ರಾವಣನ ಮೀರುವಗೆ ೧

ಭೀಮನಿಗೆ ರಿಪುಕುಲ ವಿ-ರಾಮನಿಗೆ ಸುಜನಾಬ್ಧಿ
ಸೋಮನಿಗೆ ಭಕ್ತಜನ ಪ್ರೇಮನಿಗೆ
ಕಾಮನಯ್ಯನ ಪಾದ ತಾಮರಸವನ್ನು ನಿ
ಷ್ಕಾಮದಲಿ ಭಜಿಪ ನಿಸ್ಸೀಮನಿಗೆ ೨

ಯತಿಯಾಗಿ ಬಂದವಗೆ ಕ್ಷಿತಿಯೊಳಗೆ ನಿಂದವಗೆ
ಪತಿತರನು ಉದ್ಧರಿಪ ಮತಿವಂತಗೆ
ರತಿಪತಿ ಪಿತ ನಮ್ಮ ಮೋಹನ್ನ ವಿಠ್ಠಲನ
ಸತತ ಸೇವಿಸುವ ಅಪ್ರತಿಮಹಿಮಗೆ ೩

---

*ಪದ್ಯ ದೊರೆಯಲಿಲ್ಲ

೧೮ ರಾಗ ಸೌರಾಷ್ಟ್ರ ಛಾಪುತಾಳ

ಜಯಮಂಗಳಂ ನಿತ್ಯ ಶುಭಮಂಗಳಂ ಪ

ಮಂಗಳಂ ಗಂಗೆಯುಂಗುಷ್ಟದಲಿ ಪಡೆದವಗೆ
ಮಂಗಳಂ ಮಹಭಯನಿವಾರಣನಿಗೆ
ಮಂಗಳಂ ಸಕಲ ಸುಜನೋದಧಿ ತಿಂಗಳಿಗೆ
ಮಂಗಳಂ ಮಹಲಕ್ಷ್ಮಿ ನರಸಿಂಹಗೆ ಅ.

ವೇದ ತಂದಿತ್ತವಗೆ ಭೂಧರವ ಪೊತ್ತವಗೆ
ಮೇದಿನಿಯ ಮೊರೆಕೇಳಿ ಕಾಯ್ದವನಿಗೆ
ಆದರದಿ ಪ್ರಹ್ಲಾದಗೊಲಿದು ಕಂಭದಿ ಬಂದ
ಮೋದದಾಯಕ ಲಕ್ಷ್ಮಿ ನರಸಿಂಹಗೆ ೧

ನೆಲವನು ಅಳೆದವಗೆ ಬಲಿಯನು ತುಳಿದವಗೆ
ಛಲದಿಂದ ಕ್ಷತ್ರಿಯರನಳಿದವನಿಗೆ
ಜಲನಿಧಿಯ ಬಂಧಿಸಿ ಜಾನಕಿಯ ತಂದವಗೆ
ಹಲಧರಾನನುಜ ಗೋವಳರಾಯಗೆ ೨

ಉತ್ತಮ ಸತಿಯರ ಸತ್ಯ ಕೆಡಿಸಿದವಗೆ
ಮತ್ತನಾದ ಕಲಿಯ ಕತ್ತರಿಸಿದವಗೆ
ಚಿತ್ತಜ ಪಿತ ನಮ್ಮ ಮೋಹನ್ನ ವಿಠ್ಠಲ
ಭಕ್ತರಿಷ್ಟವ ಕೊಡುವ ಭಾಗ್ಯನಿಧಿಗೆ ೩

ಶ್ರೀಕೃಷ್ಣಾರ್ಪಣಮಸ್ತು

---